| | | | | |
|---|---|---|---|---|
| 2645 | Omkar S/o yashawant | - | GF | 419 |
| 2646 | Kalyani S/o Devendrappa | - | GF | 420 |
| 2647 | Devaki W/o Chandramappa Guttedar | - | GF | 421 |
| 2648 | Mastanappa S/o Daryappa | - | GF | 422 |
| 2649 | Zianuddin S/o Pashamiya | - | GF | 423 |
| 2650 | Mahaboob S/o Hussain Shaik | - | GF | 424 |
| 2651 | Chandrakanth S/o Iswar Dodamani | - | GF | 425 |
| 2652 | Akash S/o Rajendra Chande | - | GF | 426 |
| 2653 | Ravi S/o Ranappa Chukhi | - | GF | 427 |
| 2654 | Lavkumar S/o Ranappa Chukhi | - | GF | 428 |
| 2655 | Sanju S/o Subash Choukhi | - | GF | 429 |
| 2656 | Rajkumar S/o Rannappa Choukhi | - | GF | 430 |
| 2657 | MALIKARJUN S/O HULEAPPA HERUR | - | GF | 431 |
| 2658 | Nagwani W/o Amarnat | - | GF | 432 |
| 2659 | Shri Shail S/o Siabanna Nandargi | - | GF | 433 |
| 2660 | Shivsharanappa S/o Nagappa Mugali | - | GF | 434 |
| 2661 | Veerbhadra S/o Kupendra | - | GF | 435 |
| 2662 | Ravi kumar S/o Mahadev Chinchuli | - | GF | 436 |
| 2663 | Parkash Mane | - | GF | 437 |
| 2664 | Laxman S/o Samrao Asowale | - | GF | 438 |
| 2665 | Ragavendra S/o Uttarkumar | - | GF | 439 |
| 2666 | Sharnayya S/o Mallikarjun Swamy | - | GF | 440 |
| 2667 | Roshan kumar S/o Malikarjun Dikhsangi | - | GF | 441 |
| 2668 | Chand Sab S/o Khajamiya | - | GF | 442 |
| 2669 | Saidabee W/o Mashak Sab | - | GF | 443 |
| 2670 | Sahera Begum W/o Late Abdul Gafoor | - | GF | 444 |
| 2671 | Ayesha W/o Khaja Pasha | - | GF | 445 |
| 2672 | Manjunath S/o Sharnappa Shindgi | - | GF | 446 |
| 2673 | Santabai W/o Arjun | - | GF | 447 |
| 2674 | Kiran S/o Malikarjun Gadbaldi | - | GF | 448 |
| 2675 | Mukkabee W/o Murtuja | - | GF | 449 |
| 2676 | Shanatabai W/o Shantalingappa Patil | - | GF | 450 |
| 2677 | BHUNESHWARI W/O MANOHAR B | - | GF | 451 |
| 2678 | SHANKER CHANDRASHEKAR | - | GF | 452 |
| 2679 | Basavaraj S/o Ningappa | - | GF | 453 |
| 2680 | Uday kumar s/o Pirappa | - | GF | 454 |
| 2681 | Umesh S/o Nagandra appa | - | GF | 455 |
| 2682 | Bhimashankar S/o Shiv Yogi Hatgundi | - | GF | 456 |
| 2683 | Tejaswar S/o Santappa Hatgundi | - | GF | 457 |
| 2684 | Arjun S/o Saibainna | - | GF | 458 |
| 2685 | Baswaraj S/o Maleshappa | - | GF | 459 |
| 2686 | Manuhar S/o Iswar | - | GF | 460 |
| 2687 | Nagamma W/o Nagappa hatgundi | - | GF | 461 |
| 2688 | Chandrakala W/o Ranappa hatgundi | - | GF | 462 |
| 2689 | Indubai W/o Prabhu Shetti | - | GF | 463 |
| 2690 | Chandrashekar S/o Sharnappa Malipatil | - | GF | 464 |
| 2691 | Santabai W/o maryappa | - | GF | 465 |
| 2692 | Mahindra kumar S/o Laxman Rao | - | GF | 466 |
| 2693 | Shivkumar S/o maleshappa | - | GF | 467 |
| 2694 | Gopal S/o Sharnappa kadganchi | - | GF | 468 |
| 2695 | Am.A.Vahid S/o Am.A.Vazid | - | GF | 469 |
| 2696 | Zakiya W/o Mashak sab | - | GF | 470 |
| 2697 | Santabai W/o Ranappa kanna | - | GF | 471 |
| 2698 | KashiBai D/o Amrut | - | GF | 472 |
| 2699 | Chandrakalla W/o Gurunath | - | GF | 473 |
| 2700 | Bandamma W/o Yashwant | - | GF | 474 |
| 2701 | Iranna S/o Shankar Pujari | - | GF | 475 |
| 2702 | Channamma W/o Sidram Belgumpi | - | GF | 476 |
| 2703 | Manikamma W/o Bhimrao | - | GF | 477 |

| 2704 | Putla bai W/o Parmesh | - | GF | 478 |
|---|---|---|---|---|
| 2705 | Manjiesab S/o Gadu Sab | - | GF | 479 |
| 2706 | Nagamma W/o Vijaykumar | - | GF | 480 |
| 2707 | Yallamma w/o Malleshi Choukhi | - | GF | 481 |
| 2708 | Jyoti W/o Gangadhar | - | GF | 482 |
| 2709 | Shivling S/o Maryappa | - | GF | 483 |
| 2710 | Nagappa S/o Bhimsha | - | GF | 484 |
| 2711 | Subadra W/o Saibanna Dikhangi | - | GF | 485 |

ಸಹಾಯಕ ಕಾರ್ಯಪಾಲಕ ಅಭಿಯಂತರರು,
ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ,
ಕಲಬುರಗಿ ಉಪ-ವಿಭಾಗ, ಕಲಬುರಗಿ

ಕಾರ್ಯಪಾಲಕ ಅಭಿಯಂತರರು.
ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ.
ಕಲಬುರಗಿ ವಿಭಾಗ. ಕಲಬುರಗಿ

**ಕರ್ನಾಟಕ ಸರ್ಕಾರ**

ಸಂಖ್ಯೆ: ಹೆಚ್‌ಡಿ 25 ಎಸ್‌ಎಸ್‌ಟಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ
ಬೆಂಗಳೂರು, ದಿನಾಂಕ:15.02.2019.

**ಇವರಿಂದ:-**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ.

**ಇವರಿಗೆ:-**

ಕಾರ್ಯದರ್ಶಿ,
ವಿಧಾನ ಸಭೆ, ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:-** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:456ಕ್ಕೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಸಲ್ಲಿಸುವ ಬಗ್ಗೆ.

**ಉಲ್ಲೇಖ:-** ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆರವರ ಪತ್ರ ಸಂಖ್ಯೆ: ಪ್ರವಿಶಾವಿಸ/15ನೇವಿಸ/3ಆ/ಪ್ರ.ಸಂ.456/2019 ದಿನಾಂಕ:05.02.2019.

-- -- --

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದನ್ವಯ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ) ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:456ಕ್ಕೆ ಸಂಬಂಧಿಸಿದ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸುತ್ತಾ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

(ಕೆ.ಪದ್ಮಿನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ)

☎080-2203 3254
**email:** uslohdkar@gmail.com & uslo-home@karnataka.gov.in

**ಪ್ರತಿ:**

1) ಮಾನ್ಯ ಗೃಹ ಮಂತ್ರಿಯವರ ಆಪ್ತ ಕಾರ್ಯದರ್ಶಿಯವರಿಗೆ.
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
3) ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್)ರವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
4) ಸರ್ಕಾರದ ಉಪ ಕಾರ್ಯದರ್ಶಿ(ಕಾನೂನು ಮತ್ತು ಸುವ್ಯವಸ್ಥೆ) ರವರ ಆಪ್ತ ಸಹಾಯಕರು, ಒಳಾಡಳಿತ ಇಲಾಖೆ.
5) ಸರ್ಕಾರದ ಅಧೀನ ಕಾರ್ಯದರ್ಶಿ(ಸಮನ್ವಯ), ಒಳಾಡಳಿತ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 456
ಮಾನ್ಯ ಸದಸ್ಯರ ಹೆಸರು : ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ)
ಉತ್ತರಿಸುವ ದಿನಾಂಕ : 13.02.2019
ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜನಪ್ರತಿನಿಧಿ ಹಾಗೂ ಇತರ ಗಣ್ಯ ವ್ಯಕ್ತಿಗಳಿಗೆ ಎಷ್ಟು ಅಂಗರಕ್ಷಕರನ್ನು ನೀಡಲಾಗಿದೆ? ಸರ್ಕಾರಕ್ಕೆ ಪಾವತಿಸಲಾದ ಮೊತ್ತ ಎಷ್ಟು? ವಿವರ ನೀಡುವುದು. | ಮಂಗಳೂರು ನಗರದಿಂದ 14 ಜನ ಪ್ರತಿನಿಧಿ / ಗಣ್ಯವ್ಯಕ್ತಿಗಳು ಹಾಗೂ ಇತರರಿಗೆ ಅಂಗರಕ್ಷಕ ಭದ್ರತೆಯನ್ನು ಒದಗಿಸಲಾಗಿದೆ.<br><br>ದಕ್ಷಿಣ ಕನ್ನಡ ಜಿಲ್ಲೆಯಿಂದ 05 ಜನ ಪ್ರತಿನಿಧಿ ಹಾಗೂ / ಗಣ್ಯ ವ್ಯಕ್ತಿಗಳು ಹಾಗೂ ಇತರರಿಗೆ ಅಂಗರಕ್ಷಕ ಭದ್ರತೆಯನ್ನು ಒದಗಿಸಲಾಗಿದೆ.<br><br>ಅಂಗರಕ್ಷಕ ಭದ್ರತೆಯನ್ನು ಒದಗಿಸಲಾಗಿರುವ ರಕ್ಷಣೆಗೊಳಪಟ್ಟ ವ್ಯಕ್ತಿಗಳಿಂದ ಭದ್ರತಾ ಶುಲ್ಕ ಪಾವತಿ ಆಧಾರದ ಮೇರೆಗೆ ಅಥವಾ ಶುಲ್ಕ ರಹಿತ ಆಧಾರದ ಮೇರೆಗೆ ಒದಗಿಸುವ ಬಗ್ಗೆ ಸರ್ಕಾರದಿಂದ ರಚಿತವಾಗಿರುವ ರಾಜ್ಯ ಅಂಗರಕ್ಷಕ ಭದ್ರತಾ ಪುನರ್ ವಿಮರ್ಶಣಾ ಸಮಿತಿ ನಿರ್ಣಯಿಸುತ್ತದೆ. |
| ಆ) | ಪಾವತಿಗೆ ಬಾಕಿ ಇರುವ ಮೊತ್ತ ಹಾಗೂ ಪಾವತಿಗೆ ಬಾಕಿ ಇರಿಸಿಕೊಂಡಿರುವವರ ಮೊತ್ತ ಎಷ್ಟು? (ವಿವರ ನೀಡುವುದು) | ಮಂಗಳೂರು ನಗರದಲ್ಲಿ 05 ಜನ ರಕ್ಷಣೆಗೊಳ್ಳಪಟ್ಟ ವ್ಯಕ್ತಿಗಳಿಗೆ ಶುಲ್ಕ ಪಾವತಿ ಆಧಾರದ ಮೇರೆಗೆ ಭದ್ರತೆಯನ್ನು ಒದಗಿಸಲಾಗಿದ್ದು. ಮಂಗಳೂರು ನಗರದಿಂದ 4 ಜನ ರಕ್ಷಣೆಗೊಳಪಟ್ಟ ವ್ಯಕ್ತಿಗಳಿಂದ ಬಾಕಿ ಇರುವ ಮೊತ್ತ ರೂ. 6,43,250/-.<br><br>ದಕ್ಷಿಣ ಕನ್ನಡ ಜಿಲ್ಲೆಯ ಒಬ್ಬ ಜನ ಪ್ರತಿನಿದಿ, ಮತ್ತೋರ್ವ ಉದ್ಯಮಿಗೆ ಶುಲ್ಕ ಪಾವತಿ ಆಧಾರದ ಮೇರೆಗೆ ಭದ್ರತೆ ಒದಗಿಸಿದ್ದು, ಬಾಕಿ ಇರುವ ಮೊತ್ತ ರೂ. 34,82,720/-. |
| ಇ) | ಬಾಕಿ ಪಾವತಿಗೆ ಸರ್ಕಾರ ಕೈಗೊಂಡ ಕ್ರಮವೇನು? | ಬಾಕಿ ಇರುವ ಮೊತ್ತವನ್ನು ಪಾವತಿಸಲು ಪೊಲೀಸ್ ಆಯುಕ್ತರು, ಮಂಗಳೂರು ನಗರ ರವರು ಕ್ರಮ ತೆಗೆದುಕೊಂಡಿರುವರು.<br><br>ಬಾಕಿ ಇರುವ ಶುಲ್ಕವನ್ನು ಪಾವತಿಸಲು ಕಾನೂನು ರೀತ್ಯ ಸೂಕ್ತ ಕ್ರಮ ಕೈಗೊಳ್ಳಲಾಗುತ್ತಿದೆ |

ಹೆಚ್‌ಡಿ 25 ಎಸ್‌ಎಸ್‌ಟಿ 2019

(ಎಂ.ಬಿ.ಪಾಟೀಲ)
ಗೃಹ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ: ಹೆಚ್‌ಡಿ 77 ಎಸ್‌ಎಸ್‌ಟಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ
ಬೆಂಗಳೂರು, ದಿನಾಂಕ:15.02.2019.

**ಇವರಿಂದ:-**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ.

**ಇವರಿಗೆ:-**

ಕಾರ್ಯದರ್ಶಿ,
ವಿಧಾನ ಸಭೆ, ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:-** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1009ಕ್ಕೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಸಲ್ಲಿಸುವ ಬಗ್ಗೆ.

**ಉಲ್ಲೇಖ:-** ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆರವರ ಪತ್ರ ಸಂಖ್ಯೆ: ಪ್ರವಿಶಾವಿಸ/15ನೇವಿಸ/3ಆ/ಪ್ರ.ಸಂ.1009/2019 ದಿನಾಂಕ:05.02.2019.

-- -- --

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದನ್ವಯ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1009ಕ್ಕೆ ಸಂಬಂಧಿಸಿದ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸುತ್ತಾ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

(ಕೆ.ಪದ್ಮಿನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ)

☎080-2203 3254
**email:** uslohdkar@gmail.com & uslo-home@karnataka.gov.in

**ಪ್ರತಿ:**

1) ಮಾನ್ಯ ಗೃಹ ಮಂತ್ರಿಯವರ ಆಪ್ತ ಕಾರ್ಯದರ್ಶಿಯವರಿಗೆ.
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
3) ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್)ರವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
4) ಸರ್ಕಾರದ ಉಪ ಕಾರ್ಯದರ್ಶಿ(ಕಾನೂನು ಮತ್ತು ಸುವ್ಯವಸ್ಥೆ) ರವರ ಆಪ್ತ ಸಹಾಯಕರು, ಒಳಾಡಳಿತ ಇಲಾಖೆ.
5) ಸರ್ಕಾರದ ಅಧೀನ ಕಾರ್ಯದರ್ಶಿ(ಸಮನ್ವಯ), ಒಳಾಡಳಿತ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1009
ಮಾನ್ಯ ಸದಸ್ಯರ ಹೆಸರು : ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ)
ಉತ್ತರಿಸುವ ದಿನಾಂಕ : 13.02.2019
ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರಸ | ವಿಷಯ | ಉತ್ತರ |
|---|---|---|
| ಅ | ಮೈಸೂರು ಜಿಲ್ಲೆ, ಹೆಗ್ಗಡದೇವನಕೋಟೆ ತಾಲ್ಲೂಕು ಗಡಿ ಪ್ರದೇಶವಾಗಿದ್ದು, ಈ ಗಡಿ ಪ್ರದೇಶದ ಅಂಚಿನಲ್ಲಿ ಕೇರಳ ರಾಜ್ಯದಿಂದ ಕಾನೂನು ಬಾಹಿರ (ಅಕ್ರಮವಾಗಿ ತ್ಯಾಜ್ಯಗಳ ಸುರಿಯುವಿಕೆ, ಅಕ್ರಮ ಮದ್ಯ ಮಾರಾಟ, ದನಗಳ ಸಾಗಾಣಿಕೆ ವಿವಿಧ ಕಳ್ಳಸಾಗಣಿಕೆ) ಚಟುವಟಿಕೆಗಳು ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೈಸೂರು ಜಿಲ್ಲೆ, ಹೆಗ್ಗಡದೇವನಕೋಟೆ ತಾಲ್ಲೂಕು ಗಡಿ ಪ್ರದೇಶವಾಗಿದ್ದು, ಈ ಗಡಿ ಪ್ರದೇಶದ ಅಂಚಿನಲ್ಲಿ ಕೇರಳ ರಾಜ್ಯದಿಂದ ಕಾನೂನು ಬಾಹಿರ (ಅಕ್ರಮವಾಗಿ ತ್ಯಾಜ್ಯಗಳ ಸುರಿಯುವಿಕೆ, ಅಕ್ರಮ ಮದ್ಯ ಮಾರಾಟ, ದನಗಳ ಸಾಗಾಣಿಕೆ ಹಾಗೂ ವಿವಿಧ ಕಳ್ಳಸಾಗಣಿಕೆ) ಚಟುವಟಿಕೆಗಳು ನಡೆಯುತ್ತಿರುವ ಬಗ್ಗೆ ಕಳೆದ ಮೂರು ವರ್ಷಗಳಲ್ಲಿ 51 ಪ್ರಕರಣಗಳು ದಾಖಲಾಗಿರುತ್ತವೆ. |
| ಆ | ಕಳೆದ 03 ವರ್ಷಗಳಲ್ಲಿ ಸದರಿ ವಿಷಯವಾಗಿ ದಾಖಲಾದ ಪ್ರಕರಣಗಳ ಸಂಖ್ಯೆ ಎಷ್ಟು? ಈ ಪ್ರಕರಣಗಳಿಗೆ ಕಡಿವಾಣ ಹಾಕಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಕಳೆದ 03 ವರ್ಷಗಳಲ್ಲಿ ದಾಖಲಾಗಿರುವ ವರ್ಷವಾರು ವಿವರ ಈ ಕೆಳಗಿನಂತಿದೆ. (see table below) |

| ವಿಷಯ | ವರ್ಷ | | | | ಒಟ್ಟು |
|---|---|---|---|---|---|
| | 2015 | 2016 | 2017 | 2018 | |
| ಅಕ್ರಮ ತ್ಯಾಜ್ಯಗಳ ಸುರಿಯುವಿಕೆ | 0 | 2 | 0 | 0 | 02 |
| ಅಕ್ರಮ ಮದ್ಯ ಮಾರಾಟ | 0 | 11 | 21 | 13 | 45 |
| ದನಗಳ ಸಾಗಾಣಿಕೆ | 0 | 0 | 0 | 4 | 04 |
| **ಒಟ್ಟು** | **0** | **13** | **21** | **17** | **51** |

**ಈ ಪ್ರಕರಣಗಳಿಗೆ ಕಡಿವಾಣ ಹಾಕಲು ಸರ್ಕಾರ ಈ ಕೆಳಕಂಡಂತೆ ಕ್ರಮಗಳನ್ನು ಕೈಗೊಂಡಿರುತ್ತದೆ.**

1. ಬಾತ್ಮಿದಾರರಿಂದ ಮಾಹಿತಿಗಳನ್ನು ಸಂಗ್ರಹಿಸಿ ಖಚಿತಪಡಿಸಿಕೊಂಡು ದಾಳಿ ನಡೆಸಿ ಆರೋಪಿತರ ವಿರುದ್ಧ ಕಾನೂನು ರೀತ್ಯ ಕ್ರಮ ಕೈಗೊಳ್ಳಲಾಗುತ್ತಿದೆ.
2. ಸುಧಾರಿತ ಗ್ರಾಮಗಸ್ತಿಗೆ ಸಂಬಂಧಿಸಿದಂತೆ ಪೋಲೀಸ್ ಮಾಹಿತಿದಾರರ ಮೂಲಕ ಮಾಹಿತಿಗಳನ್ನು ಸಂಗ್ರಹಿಸಲಾಗುತ್ತಿದೆ.
3. ಗುಪ್ತ ಮಾಹಿತಿ ಹಾಗೂ ಅಪರಾಧ ಪತ್ತೆ ಸಿಬ್ಬಂದಿಗಳನ್ನು ನಿಯೋಜಿಸಿ ಕ್ರಮ ಕೈಗೊಳ್ಳಲಾಗುತ್ತಿದೆ.
4. ಬೀಟ್ ಸಿಬ್ಬಂದಿಗಳಿಗೆ ಅಕ್ರಮ ಚಟುವಟಿಕೆಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲು ಸೂಚಿಸಲಾಗಿದೆ.

...2

| | | |
|---|---|---|
| ಇ | ಸದರಿ ಪ್ರಕರಣಗಳಿಗೆ ಕಡಿವಾಣ ಹಾಕಲು ಅರಣ್ಯ ಇಲಾಖೆ ಚೆಕ್‌ಪೋಸ್ಟ್ ಬಳಿ ಪೊಲೀಸ್ ಚೆಕ್ ಪೋಸ್ಟ್ ಪ್ರಾರಂಭಿಸುವ ಕುರಿತು ಸರ್ಕಾರದ ಅಭಿಪ್ರಾಯವೇನು? (ವಿವರ ನೀಡುವುದು) | ಕೇರಳ ರಾಜ್ಯದ ಗಡಿಯಾದ ಮೈಸೂರು ಜಿಲ್ಲೆಯ ಬಾವಲಿ ಗ್ರಾಮ[illegible] ಅರಣ್ಯ ಇಲಾಖೆಯ ಚೆಕ್‌ಪೋಸ್ಟ್ ಇದ್ದು, ಸದರಿ ಸ್ಥಳವು ಬೀಚನ[illegible]ಯಿಂದ ಸುಮಾರು 65 ಕಿ.ಮೀ. ದೂರವಿರುತ್ತದೆ. ಯಾವುದೇ ತರಹದ [illegible]ತಕರ ಘಟನೆಗಳು ಹಾಗೂ ಅಕ್ರಮ ಚಟುವಟಿಕೆಗಳು ನಡೆಯದಂತೆ [illegible]ಲು ಮುಂಜಾಗೃತಾ ಕ್ರಮವಾಗಿ ಬೀಚನಹಳ್ಳಿ ಠಾಣೆಯಿಂದ ಒಬ್ಬ[illegible]ದಿ ಹಾಗೂ ಮೈಸೂರು ಪೊಲೀಸ್ ಅರಣ್ಯ ಸಂಚಾರಿ ದಳದ [illegible]ರು ಸಿಬ್ಬಂದಿರವರು ಅರಣ್ಯ ಇಲಾಖೆಯ ಸಿಬ್ಬಂದಿರವರೊಂದಿ[illegible] [illegible]ಣ್ಯ ಇಲಾಖೆಯ ಚೆಕ್‌ಪೋಸ್ಟ್‌ನಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. |

ಹೆಚ್‌ಡಿ 77 ಎಸ್‌ಎಸ್‌ಟಿ 2019

(ಎಂ.ಬಿ.ಪಾಟೀಲ)
ಗೃಹ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ: ಹೆಚ್‌ಡಿ 23 ಎಸ್‌ಎಸ್‌ಟಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ
ಬೆಂಗಳೂರು, ದಿನಾಂಕ:15.02.2019.

**ಇವರಿಂದ:-**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ.

**ಇವರಿಗೆ:-**

ಕಾರ್ಯದರ್ಶಿ,
ವಿಧಾನ ಸಭೆ, ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:-** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಲಾಲಾಜಿ ಆರ್. ಮೆಂಡನ್ (ಕಾಪು)ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1061ಕ್ಕೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಸಲ್ಲಿಸುವ ಬಗ್ಗೆ.

**ಉಲ್ಲೇಖ:-** ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆರವರ ಪತ್ರ ಸಂಖ್ಯೆ: ಪ್ರವಿಶಾವಿಸ/15ನೇವಿಸ/3ಅ/ಪ್ರ.ಸಂ.1061/2019 ದಿನಾಂಕ:05.02.2019.

-- -- --

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದನ್ವಯ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಲಾಲಾಜಿ ಆರ್. ಮೆಂಡನ್ (ಕಾಪು)ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1061ಕ್ಕೆ ಸಂಬಂಧಿಸಿದ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸುತ್ತಾ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

(ಕೆ.ಪದ್ಮಿನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ)
☎080-2203 3254
**email:** uslohdkar@gmail.com & uslo-home@karnataka.gov.in

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1061
ಮಾನ್ಯ ಸದಸ್ಯರ ಹೆಸರು : ಶ್ರೀ ಲಾಲಾಜಿ ಆರ್.ಮೆಂಡನ್. (ಕಾಪು)
ಉತ್ತರಿಸುವ ದಿನಾಂಕ : 13.02.2019
ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ | ಉಡುಪಿ ಜಿಲ್ಲೆಯ ಮಲ್ಪೆ ಕರಾವಳಿಯ ಸುವರ್ಣ ತ್ರಿಭುಜ ಮೀನುಗಾರಿಕಾ ಯಾಂತ್ರಿಕ ಬೋಟು ಕಣ್ಮರೆಯಾಗಿ 7 ಜನ ಮೀನುಗಾರರು ನಾಪತ್ತೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ದಿನಾಂಕ 22/12/2018ರಂದು ಪಿರ್ಯಾದಿದಾರರಾದ ನಿತ್ಯಾನಂದ ಕೋಟ್ಯಾನ್, ತಂದೆ ಚಾಂಗ್ಲ ಕುಂದರ, 35 ವರ್ಷ, ವಾಸ:ಶಾಂತಿ ನಿಕೇತನ ಬಡಾನಿಡಿಯೂರು ಗ್ರಾಮ ರವರು ಉಡುಪಿ ಜಿಲ್ಲೆಯ ಮಲ್ಪೆ ಪೊಲೀಸ್ ಠಾಣೆಗೆ ಲಿಖಿತ ಪಿರ್ಯಾದಿ ನೀಡಿದ್ದು, ಪಿರ್ಯಾದಿಯ ಅಣ್ಣನಾದ ಚಂದ್ರಶೇಖರ ಎಂಬವರು ಸುವರ್ಣ ತ್ರಿಭುಜ ಐಎನ್‌ಡಿ–02–ಎಂಎಂ–4632ನೇ ಸಂಖ್ಯೆಯ ಮೀನುಗಾರಿಕಾ ಬೋಟ್ ಹೊಂದಿದ್ದು ದಿನಾಂಕ:13/12/2018 ರಂದು ಇತರೇ ಮೀನುಗಾರರಾದ ದಾಮೋದರ, ಲಕ್ಷ್ಮಣ್, ಸತೀಶ, ರವಿ, ಹರೀಶ, ರಮೇಶ ರವರೊಂದಿಗೆ ರಾತ್ರಿ 11:00 ಗಂಟೆಗೆ ಸದ್ರಿ ಬೋಟಿನಲ್ಲಿ ಮಲ್ಪೆ ಬಂದರಿನಿಂದ ಆಳ ಸಮುದ್ರ ಮೀನುಗಾರಿಕೆಗೆ ತೆರಳಿದ್ದು ದಿನಾಂಕ:15/12/2018 ರಂದು ರಾತ್ರಿ 01:00 ಗಂಟೆಯ ವರೆಗೆ ಮೀನುಗಾರರು ಸಂಪರ್ಕದಲ್ಲಿದ್ದು ನಂತರ ಸಂಪರ್ಕ ಸಿಗದೇ ಸುವರ್ಣ ತ್ರಿಭುಜ ಬೋಟ್ ಮತ್ತು ಪಿರ್ಯಾದಿಯ ಅಣ್ಣ ಚಂದ್ರಶೇಖರ ಮತ್ತು ಇತರ 6 ಜನ ಮೀನುಗಾರರನ್ನು ಹುಡುಕಾಡಿದರೂ ಪತ್ತೆಯಾಗಿರುವುದಿಲ್ಲ ಎಂಬುದಾಗಿ ನೀಡಿದ ಪಿರ್ಯಾದಿಯಂತೆ ಅಪರಾಧ ಕ್ರಮಾಂಕ 154/2018 ರಂತೆ ಮನುಷ್ಯ ಕಾಣೆ ಪ್ರಕರಣವು ಮಲ್ಪೆ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುತ್ತದೆ. |
| ಆ | ಬಂದಿದ್ದಲ್ಲಿ, ಇವರನ್ನು ಪತ್ತೆ ಹಚ್ಚಲು ಸರ್ಕಾರ ಕೈಗೊಂಡ ಕ್ರಮಗಳೇನು: | ಈ ವಿಷಯವು ಇಲಾಖೆಯ ಗಮನಕ್ಕೆ ಬಂದ ಕೂಡಲೇ ಕೋಸ್ಟ್‌ಗಾರ್ಡ್, ಮಂಗಳೂರು ಇವರಿಗೆ ಸಂಪೂರ್ಣ ಮಾಹಿತಿಯನ್ನು ನೀಡಲಾಗಿದೆ ಹಾಗೂ ಈ ಬಗ್ಗೆ ಗೋವಾ ಹಾಗೂ ಮಹಾರಾಷ್ಟ್ರ ರಾಜ್ಯದ ಮೀನುಗಾರಿಕೆ ಇಲಾಖೆಗೆ ದೋಣಿ ನಾಪತ್ತೆಯಾಗಿರುವ ಕುರಿತು ಪತ್ರ ಬರೆಯಲಾಗಿದೆ. ಈ ಕುರಿತು ಮಾನ್ಯ ಮುಖ್ಯ ಮಂತ್ರಿಗಳು ನೆರೆಯ ರಾಜ್ಯದ ಮುಖ್ಯ ಮಂತ್ರಿಗಳಿಗೆ ಪತ್ರ ಮುಖೇನ ಮೀನುಗಾರರ ಪತ್ತೆಗೆ ನೆರವು ನೀಡಲು ಕೋರಿರುತ್ತಾರೆ. ಅಲ್ಲದೆ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಮಹಾರಾಷ್ಟ್ರ ಮತ್ತು ಗೋವಾ ರಾಜ್ಯದ ಮುಖ್ಯ ಕಾರ್ಯದರ್ಶಿಗಳು ಹಾಗೂ ಕೇಂದ್ರ ಸರ್ಕಾರದ ಗೃಹ ಕಾರ್ಯದರ್ಶಿಗಳಿಗೆ ಪತ್ರ ಮುಖೇನ ಮೀನುಗಾರರ ಪತ್ತೆಗೆ ನೆರವು ನೀಡಲು ಸಹಕಾರವನ್ನು ಕೋರಿರುತ್ತಾರೆ. ಅಲ್ಲದೆ ನಾಪತ್ತೆಯಾದ ಸುವರ್ಣ ತ್ರಿಭುಜ ದೋಣಿ ಮತ್ತು 7 ಜನ ಮೀನುಗಾರರನ್ನು ಪತ್ತೆಹಚ್ಚಲು ಇಸ್ರೋ ನೆರವು ಕೋರಿ ಪತ್ರ ಬರೆದಿದ್ದು ಭಾರತೀಯ ನೌಕಾ ದಳ ಮತ್ತು ಕೋಸ್ಟ್‌ಗಾರ್ಡ್ ಮುಖಾಂತರ ಪತ್ತೆ ಕಾರ್ಯ ಜಾರಿಯಲ್ಲಿದೆ. |

..2

| | | |
|---|---|---|
| ಇ | ಕರಾವಳಿ ಮೀನುಗಾರರಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರದ ಆಯಾ ಗಡಿ ಪ್ರದೇಶದ ಬಗ್ಗೆ ಇರುವ ಷರತ್ತು ಮತ್ತು ನಿಯಮಗಳೇನು (ಸಂಪೂರ್ಣ ಮಾಹಿತಿ ನೀಡುವುದು) | ತೀರದಿಂದ 12 ನಾಟಿಕಲ್ ಮೈಲ್‌ವರೆಗಿನ ಟೆರಿಟೋರಿಯಲ್ ಪ್ರದೇಶದ ಮೀನುಗಾರಿಕೆಯು ಆಯಾ ರಾಜ್ಯ ಸರ್ಕಾರಕ್ಕೆ ಸಂಬಂಧಿಸಿರುತ್ತದೆ. ಸದರಿ ಪ್ರದೇಶದಲ್ಲಿ ಆಯಾ ರಾಜ್ಯದಲ್ಲಿ ನೋಂದಣಿಯಾದ ಮೀನುಗಾರಿಕಾ ದೋಣಿಗಳಿಗೆ ಮೀನುಗಾರಿಕೆಗೆ ಅವಕಾಶವಿರುತ್ತದೆ.<br>ತೀರದಿಂದ 12 ನಾಟಿಕಲ್ ಮೈಲ್ ಹೊರಗೆ 200 ನಾಟಿಕಲ್ ಮೈಲ್‌ವರೆಗಿನ ಇಇಝಡ್ ಪ್ರದೇಶದ ಮೀನುಗಾರಿಕೆ ಕೇಂದ್ರ ಸರ್ಕಾರದ ನಿಯಂತ್ರಣದಲ್ಲಿದ್ದು ಯಾವುದೇ ರಾಜ್ಯದ ದೋಣಿ ಇಲ್ಲಿ ಮೀನುಗಾರಿಕೆ ಮಾಡಬಹುದಾಗಿದೆ. |
| ಈ | ಕೇಂದ್ರ ಮತ್ತು ರಾಜ್ಯದ ಗಡಿ ಪ್ರದೇಶದಲ್ಲಿ ಬಾಹ್ಯಶಕ್ತಿಗಳ ಕೈವಾಡ ಮತ್ತು ಸಮುದ್ರ ಕಳ್ಳರ ಬಗ್ಗೆ. ಸರ್ಕಾರ ಕೈಗೊಂಡ ಕ್ರಮಗಳೇನು(ವಿವರ ನೀಡುವುದು) | 1) ಕರಾವಳಿ ಕಾವಲು ಪೊಲೀಸ್ ಘಟಕದಲ್ಲಿ ಒಟ್ಟು 9 ಪೊಲೀಸ್ ಠಾಣೆಗಳಿದ್ದು, ಸಮುದ್ರದಿಂದ 12 ನಾಟಿಕಲ್ ಮೈಲ್‌ವರೆಗೆ ಠಾಣಾ ಸರಹದ್ದುಗಳಲ್ಲಿ ಒಟ್ಟು 13 ಇಂಟರ್‌ಸೆಪ್ಟರ್ ಬೋಟ್‌ಗಳ ಮೂಲಕ ಗಸ್ತು ನಿರ್ವಹಿಸುತ್ತಿದ್ದು, ಸರಹದ್ದಿನಲ್ಲಿ ಬರುವ ಎಲ್ಲಾ ಬೋಟ್‌ಗಳ ತಪಾಸಣೆಯನ್ನು ನಡೆಸಲಾಗುತ್ತಿದೆ.<br>2) ಮೀನುಗಾರಿಕೆಯಲ್ಲಿ ತೊಡಗಿರುವ ಮೀನುಗಾರಿಕಾ ಸಮುದಾಯದವರನ್ನು ಒಳಗೊಂಡಂತೆ ಪ್ರತೀ ಸಿ.ಎಸ್.ಪಿ ಠಾಣೆಗಳಲ್ಲಿ "ಸಾಗರ ರಕ್ಷಕ ದಳ" ರಚಿಸಿದ್ದು, ಆಗಿಂದಾಗ್ಗೆ ಸಭೆಗಳನ್ನು ನಡೆಸುತ್ತಿದ್ದು ಮಾಹಿತಿ ವಿನಿಮಯ ಮಾಡಿಕೊಳ್ಳಲಾಗುತ್ತಿದೆ.<br>3) ಸಮುದ್ರ ತಟದಲ್ಲಿರುವ ಆಯ್ದ ಯುವಕರನ್ನು "ಕರಾವಳಿ ನಿಯಂತ್ರಣ ದಳ" ದ ಸದಸ್ಯರನ್ನಾಗಿ ನೇಮಿಸಿಕೊಂಡಿದ್ದು, ಪ್ರತೀ ದಿನ ಕರಾವಳಿಯ ಚಟುವಟಿಕೆಗಳ ಬಗ್ಗೆ ನಿಗಾ ವಹಿಸಲಾಗಿದೆ. |

ಹೆಚ್‌ಡಿ 23 ಎಸ್‌ಎಸ್‌ಟಿ 2019

(ಎಂ.ಬಿ.ಪಾಟೀಲ)
ಗೃಹ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ: ಹೆಚ್‌ಡಿ 24 ಎಸ್‌ಎಸ್‌ಟಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ
ಬೆಂಗಳೂರು, ದಿನಾಂಕ:15.02.2019.

**ಇವರಿಂದ:-**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ.

**ಇವರಿಗೆ:-**

ಕಾರ್ಯದರ್ಶಿ,
ವಿಧಾನ ಸಭೆ, ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:-** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಾಧುಸ್ವಾಮಿ ಜೆ.ಸಿ.ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:07ಕ್ಕೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಸಲ್ಲಿಸುವ ಬಗ್ಗೆ.

**ಉಲ್ಲೇಖ:-** ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆರವರ ಪತ್ರ ಸಂಖ್ಯೆ: ಪ್ರವಿಶಾವಿಸ/15ನೇವಿಸ/3ಆ/ಪ್ರ.ಸಂ.7/2019 ದಿನಾಂಕ:30.01.2019.

-- -- --

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದನ್ವಯ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಾಧುಸ್ವಾಮಿ ಜೆ.ಸಿ.ರವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:7ಕ್ಕೆ ಸಂಬಂಧಿಸಿದ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸುತ್ತಾ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

(ಕೆ.ಪದ್ಮಿನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ)

☎080-2203 3254
**email:** uslohdkar@gmail.com & uslo-home@karnataka.gov.in

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 07
ಮಾನ್ಯ ಸದಸ್ಯರ ಹೆಸರು : ಶ್ರೀ ಮಾಧುಸ್ವಾಮಿ ಜೆ.ಸಿ. (ಚಿಕ್ಕನಾಯಕನಹಳ್ಳಿ)
ಉತ್ತರಿಸುವ ದಿನಾಂಕ : 13.02.2019
ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಖಾಸಗಿ ಭದ್ರತಾ ಸಿಬ್ಬಂದಿ ಕಾರ್ಯ ನಿರ್ವಹಿಸಲು ಅವರ ನಡತೆ ಮತ್ತು ಹಿನ್ನೆಲೆಯ ಮಾಹಿತಿಯನ್ನು ನೀಡುವ ಬಗ್ಗೆ ದಿನಾಂಕ: 31ನೇ ಆಗಸ್ಟ್ 2009ರ ಕರ್ನಾಟಕ ರಾಜ್ಯ ಪತ್ರದಲ್ಲಿ ನಿಯಮಗಳನ್ನು ಪ್ರಕಟಿಸಲಾಗಿದೆಯೇ; | ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 170 ಎಸ್‌ಎಸ್‌ಟಿ 2009 ದಿನಾಂಕ: 23.07.2009ರಲ್ಲಿ ಕರ್ನಾಟಕ ಪ್ರೈವೇಟ್ ಸೆಕ್ಯೂರಿಟಿ ಏಜೆನ್ಸಿಸ್ ನಿಯಮ 2008 ಅನ್ನು ಹೊರಡಿಸಲಾಗಿದ್ದು, ಖಾಸಗಿ ಭದ್ರತಾ ಸಿಬ್ಬಂದಿಗಳ ನಡತೆ ಮತ್ತು ಹಿನ್ನೆಲೆ ಬಗ್ಗೆ ಮಾಹಿತಿ ಪಡೆಯುವ ಕುರಿತು ನಿಯಮ-4 ರಲ್ಲಿ ಉಲ್ಲೇಖಿಸಲಾಗಿದೆ |
| ಆ | ನಿಯಮಗಳನ್ವಯ ಈ ಮಾಹಿತಿಯನ್ನು ಪ್ರತಿ ಮೂರು ವರ್ಷಕ್ಕೊಮ್ಮೆ ಸಲ್ಲಿಸಲು ಅವಕಾಶ ಕಲ್ಪಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಖಾಸಗಿ ಭದ್ರತಾ ಸಿಬ್ಬಂದಿಗಳ ನಡತೆ ಮತ್ತು ಹಿನ್ನೆಲೆಯ ಬಗ್ಗೆ ಪ್ರತಿ ಮೂರು ವರ್ಷಗಳಿಗೊಮ್ಮೆ ಮಾಹಿತಿ ಪಡೆಯುವ ಕುರಿತು ಕರ್ನಾಟಕ ಪ್ರೈವೇಟ್ ಸೆಕ್ಯೂರಿಟಿ ಏಜೆನ್ಸಿಸ್ ನಿಯಮ 2008ರ ನಿಯಮ-4(9) ರಲ್ಲಿ ಉಲ್ಲೇಖಿಸಲಾಗಿರುತ್ತದೆ. |
| ಇ | ಬಂದಿದ್ದಲ್ಲಿ ಬೆಂಗಳೂರು ನಗರ ಪೊಲೀಸ್ ಕಮೀಷನರ್ ರವರು ಪ್ರತಿ ವರ್ಷವು ಸಲ್ಲಿಸಬೇಕೆಂದು ಆದೇಶಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಆದೇಶ ಸಂಖ್ಯೆ ಹೆಚ್‌ಡಿ 283 ಎಸ್‌ಎಸ್‌ಟಿ 2015 ದಿನಾಂಕ: 03.09.2015ರಲ್ಲಿ ಸಾರ್ವಜನಿಕರು / ವಿದ್ಯಾರ್ಥಿಗಳು/ ಕಾರ್ಮಿಕರ ಪೊಲೀಸ್ ಪರಿಶೀಲನಾ ವರದಿ (PVC & PCC) ಪ್ರಮಾಣ ಪತ್ರಗಳ ಕಾಲಮಿತಿಯನ್ನು ಪ್ರಮಾಣ ಪತ್ರ ಹೊರಡಿಸಿದ ದಿನಾಂಕದಿಂದ ಒಂದು ವರ್ಷದವರೆಗೆ ಊರ್ಜಿತವಾಗಿರುತ್ತದೆ ಎಂದು ಆದೇಶಿಸಿದೆ. |
| ಈ | ಹಾಗಿದ್ದಲ್ಲಿ, ಇದರಿಂದ ಬಡ ಖಾಸಗಿ ಭದ್ರತಾ ಸಿಬ್ಬಂದಿ ಗಳಿಗೆ ಪ್ರತಿವರ್ಷ ಸುಮಾರು ರೂ 1000-1500ಗಳ ಅನಗತ್ಯ ವೆಚ್ಚ ಹಾಗೂ ಕಾಲ ಹರಣವಾದಂತಾಗುವುದಿಲ್ಲವೇ; ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರದ ನಿಲುವೇನು; | ಸರ್ಕಾರದ ಆದೇಶ ಸಂಖ್ಯೆ ಹೆಚ್‌ಡಿ 283 ಎಸ್‌ಎಸ್‌ಟಿ 2015 ದಿನಾಂಕ: 03.09.2015ರನ್ವಯ ಕ್ರಮವಹಿಸಲಾಗಿದೆ. |
| ಉ | ರಾಜ್ಯ ಪತ್ರದಲ್ಲಿ ಪ್ರಕಟಿಸಿರುವಂತೆ ಇದನ್ನು ಪ್ರತಿ ಮೂರು ವರ್ಷಗಳಿಗೊಮ್ಮೆ ಪಡೆಯಲು ಆದೇಶಿಸಲಾಗುವುದೇ? (ವಿವರ ನೀಡುವುದು) | |

ಹೆಚ್‌ಡಿ 24 ಎಸ್‌ಎಸ್‌ಟಿ 2019

(ಎಂ.ಬಿ.ಪಾಟೀಲ)
ಗೃಹ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ: MWD 10 LMQ 2019

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:12-02-2019.

**ಇವರಿಂದ,**

**ಸರ್ಕಾರದ ಕಾರ್ಯದರ್ಶಿಗಳು,**
**ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,**
**ಬೆಂಗಳೂರು.**

**ಇವರಿಗೆ,**

**ಕಾರ್ಯದರ್ಶಿ**
**ಕರ್ನಾಟಕ ವಿಧಾನ ಸಭೆ**
**ವಿಧಾನ ಸೌಧ**
**ಬೆಂಗಳೂರು.**

204
13/02/19

**ಮಾನ್ಯರೇ,**

**ವಿಷಯ :** ಶ್ರೀ ತನ್ವೀರ್ ಸೇಠ್ (ನರಸಿಂಹರಾಜ) ಮಾನ್ಯ ವಿಧಾನ ಸಭೆ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 702 **ಕ್ಕೆ** ಉತ್ತರಿಸುವ ಬಗ್ಗೆ.

* * * *

ಶ್ರೀ ತನ್ವೀರ್ ಸೇಠ್ (ನರಸಿಂಹರಾಜ), ಮಾನ್ಯ ವಿಧಾನ ಸಭೆ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:702 **ಕ್ಕೆ** ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

**(ಎಸ್.ಎಜಾಸ್ ಪಾಷ)**
ಶಾಖಾಧಿಕಾರಿ
ಅಲ್ಪಸಂಖ್ಯಾತರ ಕಲ್ಯಾಣ ಹಜ್
ಮತ್ತು ವಕ್ಫ್ ಇಲಾಖೆ.

# ಕರ್ನಾಟಕ ವಿಧಾನಸಭೆ

1. ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 702
2. ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್ (ನರಸಿಂಹರಾಜ)
3. ಉತ್ತರಿಸಬೇಕಾದ ದಿನಾಂಕ : 13-02-2019
4. ಉತ್ತರಿಸುವವರು : ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳು, ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>2018-19ನೇ ಸಾಲಿನಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗೆ ಆಯವ್ಯಯದಲ್ಲಿ ಮೀಸಲಿಟ್ಟಿರುವ ಒಟ್ಟು ಅನುದಾನ ಎಷ್ಟು; (ಯೋಜನೆವಾರು ವಿವರ ನೀಡುವುದು)</td><td>
<u>ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ</u><br>
2018-19ನೇ ಸಾಲಿನಲ್ಲಿ ಅಲ್ಪಸಂಖ್ಯಾತರ ನಿರ್ದೇಶನಾಲಯಕ್ಕೆ ಯೋಜನೆವಾರು ಮೀಸಲಿಟ್ಟ ಅನುದಾನದ ವಿವರ ಅನುಬಂಧ-1 ರಲ್ಲಿ ಲಗತ್ತಿಸಿದೆ.<br><br>
<u>ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿ.</u><br>
2018-19ನೇ ಸಾಲಿನಲ್ಲಿ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಕ್ಕೆ ರೂ.295.80ಕೋಟಿಗಳ ಅನುದಾನವನ್ನು ನಿಗದಿಪಡಿಸಲಾಗಿದೆ. ಯೋಜನೆವಾರು ಮಾಹಿತಿ ಅನುಬಂಧ"ಅ" ರಲ್ಲಿ ಒದಗಿಸಲಾಗಿದೆ.<br><br>
<u>ಕರ್ನಾಟಕ ರಾಜ್ಯ ವಕ್ಫ್ ಮಂಡಳಿ</u><br>
2018-19ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ವಕ್ಫ್ ಮಂಡಳಿಗೆ ಈ ಕೆಳಕಂಡ ಕಾರ್ಯಕ್ರಮವಾರು ನಿಗಧಿಯಾದ ಅನುದಾನದ ವಿವರ
<table>
<tr><th>ಕ್ರ. ಸಂ.</th><th>ಕಾರ್ಯಕ್ರಮಗಳು</th><th>ನಿಗಧಿ ಪಡಿಸಿದ ಅನುದಾನ (ರೂ.ಲಕ್ಷಗಳಲ್ಲಿ)</th></tr>
<tr><td>1</td><td>ಪೇಶ್ ಇಮಾಮ್ ಮತ್ತು ಮೌಜನ್ಸ್‌ಗಳ ಗೌರವಧನ</td><td>7500.00</td></tr>
<tr><td>2</td><td>ವಕ್ಫ್ ಸಂಸ್ಥೆಗಳ ದುರಸ್ಥಿ ಮತ್ತು ಜೀರ್ಣೋದ್ಧಾರಕ್ಕಾಗಿ</td><td>1000.00</td></tr>
<tr><td>3</td><td>ವಕ್ಫ್ ಆಸ್ತಿಗಳ ಸಂರಕ್ಷಣೆಗೆ</td><td>3500.00</td></tr>
<tr><td>4</td><td>ಅಲ್ಪಸಂಖ್ಯಾತರ ಯಾತ್ರಾ ಸ್ಥಳಗಳಲ್ಲಿ ಮೂಲ ಸೌಲಭ್ಯ ಅಭಿವೃದ್ಧಿ</td><td>200.00</td></tr>
<tr><td>5</td><td>ಕರ್ನಾಟಕ ರಾಜ್ಯ ವಕ್ಫ್ ಮಂಡಳಿಗೆ ಸಹಾಯಾನುದಾನ (ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನ. ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತ್. ಕರ್ನಾಟಕ ವಕ್ಫ್ ಟ್ರಿಬ್ಯುನಲ್. ಕರ್ನಾಟಕ ರಾಜ್ಯ ಹಜ್ ಸಮಿತಿಯ ನಿರ್ವಹಣೆಗೆ )</td><td>2025.00</td></tr>
</table>
</td></tr>
</table>

**ಕರ್ನಾಟಕ ಅಲ್ಪಸಂಖ್ಯಾತರ ಆಯೋಗ**

2018-19ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗಕ್ಕೆ ರೂ.188 ಲಕ್ಷಗಳು ಆಯವ್ಯಯದಲ್ಲಿ ಮೀಸಲಿಟ್ಟಿದ್ದು, ಸದರಿ ಅನುದಾನವನ್ನು ಅಧ್ಯಕ್ಷರು ಮತ್ತು ಅಧಿಕಾರಿಗಳ ವೇತನ ಮತ್ತು ಇತರೆ ಕಛೇರಿಯ ವೆಚ್ಚಕ್ಕಾಗಿ ಬಳಸಲಾಗುತ್ತಿದೆ.

ಆಯೋಗದಲ್ಲಿ ಯಾವುದೇ ರೀತಿಯ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿಲ್ಲ.

**ಕರ್ನಾಟಕ ರಾಜ್ಯ ಹಜ್ ಸಮಿತಿ**

ಕರ್ನಾಟಕ ರಾಜ್ಯ ಹಜ್ ಸಮಿತಿಯ ನಿರ್ವಹಣೆ ಹಾಗೂ ಹಜ್‌ಕ್ಯಾಂಪ್ ಅಯೋಜನೆಗಾಗಿ 2018-19 ನೇ ಸಾಲಿನಲ್ಲಿ ರೂ.240.00ಲಕ್ಷಗಳು ಮೀಸಲಿರಿಸ ಲಾಗಿರುತ್ತದೆ.

ಬೆಂಗಳೂರಿನ ಹಜ್ ಭವನದ ನಿರ್ಮಾಣಕಾರ್ಯಕ್ಕಾಗಿ ರೂ. 760.00 ಲಕ್ಷಗಳನ್ನು ಮೀಸಲಿರಿಸಲಾಗಿದೆ.

**ಕರ್ನಾಟಕ ಉರ್ದು ಅಕಾಡೆಮಿ**

ಅಲ್ಪಸಂಖ್ಯಾತರ ಕಲ್ಯಾಣ ಹಜ್ ಮತ್ತು ವಕ್ಫ್ ಇಲಾಖೆಯ ಅಧೀನದಲ್ಲಿ ಕರ್ನಾಟಕ ಉರ್ದು ಅಕಾಡೆಮಿಯು ರಾಜ್ಯದಲ್ಲಿ ಉರ್ದು ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗಾಗಿ ಕಾರ್ಯನಿರ್ವಹಿಸುವ ಸ್ವಾಯತ್ತ ಸಂಸ್ಥೆಯಾಗಿರುತ್ತದೆ. ಕರ್ನಾಟಕ ಉರ್ದು ಅಕಾಡೆಮಿಗೆ 2018-19ನೇ ಸಾಲಿನಲ್ಲಿ ರೂ.215.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಆ | ಈ ಪೈಕಿ ಈವರೆಗೆ ಖರ್ಚಾದ ಅನುದಾನ ಎಷ್ಟು (ಯೋಜನೆವಾರು ವಿವರ ನೀಡುವುದು)

**ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ**

ಯೋಜನೆವಾರು ಖರ್ಚಾದ ಅನುದಾನದ ವಿವರ ಅನುಬಂಧ-1 ರಲ್ಲಿ ಲಗತ್ತಿಸಿದೆ.

**ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿ.**

ಮೇಲಿನ ಅನುಬಂಧದಲ್ಲಿ ಮಾಹಿತಿ ಒದಗಿಸಲಾಗಿದೆ.

**ಕರ್ನಾಟಕ ರಾಜ್ಯ ವಕ್ಫ್ ಮಂಡಳಿ**

2018-19ನೇ ಸಾಲಿನ ಜನವರಿ 2019ರ ಅಂತ್ಯಕ್ಕೆ ಕಾರ್ಯಕ್ರಮವಾರು ಖರ್ಚಾದ ಅನುದಾನದ ವಿವರ.

| ಕ್ರ. ಸಂ. | ಕಾರ್ಯಕ್ರಮಗಳು | 2018-19ನೇ ಸಾಲಿನಲ್ಲಿ ಜನವರಿ 2019ರ ಅಂತ್ಯದ ವರೆಗೆ ಖರ್ಚಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 1 | ಪೇಶ್ ಇಮಾಮ್ ಮತ್ತು ಮೌಜನ್ಸ್‌ಗಳ ಗೌರವಧನ | 4815.25 |
| 2 | ವಕ್ಫ್ ಸಂಸ್ಥೆಗಳ ದುರಸ್ಥಿ ಮತ್ತು ಜೀರ್ಣೋದ್ಧಾರಕ್ಕಾಗಿ | 1895.88 |
| 3 | ವಕ್ಫ್ ಆಸ್ತಿಗಳ ಸಂರಕ್ಷಣೆಗೆ | 2095.00 |

<table>
<tr><td></td><td></td><td>

| 4 | ಅಲ್ಪಸಂಖ್ಯಾತರ ಯಾತ್ರಾ ಸ್ಥಳಗಳಲ್ಲಿ ಮೂಲ ಸೌಲಭ್ಯ ಅಭಿವೃದ್ಧಿ | 245.00 |
|---|---|---|
| 5 | ಕರ್ನಾಟಕ ರಾಜ್ಯ ವಕ್ಫ್ ಮಂಡಳಿಗೆ ಸಹಾಯಾನುದಾನ (ವಕ್ಫ್ ಮಹಿಳಾ ಅಭಿವೃದ್ಧಿ ಪ್ರತಿಷ್ಠಾನ, ಕರ್ನಾಟಕ ರಾಜ್ಯ ವಕ್ಫ್ ಪರಿಷತ್ತ್, ಕರ್ನಾಟಕ ವಕ್ಫ್ ಟ್ರಿಬ್ಯುನಲ್, ಕರ್ನಾಟಕ ರಾಜ್ಯ ಹಜ್ ಸಮಿತಿಯ ನಿರ್ವಹಣೆಗೆ ) | 1707.55 |

ಕಳೆದ ವರ್ಷ ಮಂಜೂರಾದ ಕಾಮಗಾರಿಗಳ ಉಳಿದ ಅನುದಾನವನ್ನು ಸಹ ಸ್ದರಿ ಆರ್ಥಿಕ ವರ್ಷದಲ್ಲಿ ವೆಚ್ಚ ಮಾಡಲಾಗಿದೆ.<br><br>
<u>ಕರ್ನಾಟಕ ರಾಜ್ಯ ಹಜ್ ಸಮಿತಿ</u><br><br>
ಹಜ್ ಸಮಿತಿಯ ನಿರ್ವಹಣೆ ಹಾಗೂ ಹಜ್‌ಕ್ಯಾಂಪ್ ಅಯೋಜನೆಗಳಿಗಾಗಿ ಖರ್ಚಾದ ಮೊತ್ತ:<br><br>
2018-19ನಲ್ಲಿ ರೂ. 200.00 ಲಕ್ಷಗಳು (ಜನವರಿ 2019 ಅಂತ್ಯದವರೆಗೆ) ಖರ್ಚಾಗಿರುತ್ತದೆ.<br><br>
2018-19 ರಲ್ಲಿ ಬೆಂಗಳೂರು ಹಜ್ ಭವನಕ್ಕಾಗಿ ರೂ. 38.00 ಲಕ್ಷಗಳು (ಜನವರಿ 2019 ಅಂತ್ಯದವರೆಗೆ)ಖರ್ಚಾಗಿರುತ್ತದೆ.<br>
<u>ಕರ್ನಾಟಕ ಉರ್ದು ಅಕಾಡೆಮಿ</u><br>
2018-19ನೇ ಸಾಲಿನಲ್ಲಿ ಜನವರಿ 2019 ರ ಅಂತ್ಯದವರೆಗೆ ಒಟ್ಟು ರೂ.127.00ಲಕ್ಷಗಳನ್ನು ಖರ್ಚು ಮಾಡಲಾಗಿದೆ.
</td></tr>
<tr><td>ಇ</td><td>ಪ್ರಸ್ತುತ 2018-19ನೇ ಆರ್ಥಿಕ ವರ್ಷವು ಅಂತಿಮಗೊಳ್ಳುತ್ತಿದ್ದು, ಉಳಿಕೆ ಇರುವ ಅನುದಾನವನ್ನು ಬಳಕೆ ಮಾಡಲು ಇಲಾಖೆಯು ಕೈಗೊಂಡಿರುವ ಕ್ರಮವೇನು, (ವಿವರವಾದ ಮಾಹಿತಿ ನೀಡುವುದು)</td><td>
<u>ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ</u><br>
ಇಲಾಖೆಯ ಎಲ್ಲಾ ಯೋಜನೆಗಳಲ್ಲಿ ಉಳಿಕೆ ಇರುವ ಅನುದಾನವನ್ನು ವರ್ಷಾಂತ್ಯಕ್ಕೆ ಸಂಪೂರ್ಣ ವೆಚ್ಚ ಮಾಡಲು ಕ್ರಮವಹಿಸಲಾಗಿದೆ.<br><br>
<u>ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿ.</u><br>
ಎಲ್ಲಾ ಅನುದಾನವನ್ನು ಬಳಕೆ ಮಾಡಲಾಗುವುದು<br><br>
<u>ಕರ್ನಾಟಕ ರಾಜ್ಯ ವಕ್ಫ್ ಮಂಡಳಿ</u><br>
2018-19ನೇ ಸಾಲಿನಲ್ಲಿ ಯಾವುದೇ ಅನುದಾನವು ಉಳಿಕೆ ಇರುವುದಿಲ್ಲ.<br><br>
<u>ಕರ್ನಾಟಕ ರಾಜ್ಯ ಹಜ್ ಸಮಿತಿ</u><br>
ಬೆಂಗಳೂರಿನಲ್ಲಿ ನಿರ್ಮಾಣವಾಗಿರುವ ಹಜ್ ಭವನದ ಆಡಿಟೋರಿಯಂ ಹಾಗೂ ಇಂಟಿರಿಯರ್ ಕೆಲಸವನ್ನು ಪೂರ್ಣಗೊಳಿಸಲು ಈ ಮೊತ್ತವನ್ನು ಬಳಕೆ ಮಾಡಿಕೊಳ್ಳಲಾಗುವುದು.
</td></tr>
</table>

| | | |
|---|---|---|
| | | **<u>ಕರ್ನಾಟಕ ಉರ್ದು ಅಕಾಡೆಮಿ</u>**<br>ಫೆಬ್ರವರಿ ಹಾಗೂ ಮಾರ್ಚ್ 2019ರಲ್ಲಿ ಉರ್ದು ಭಾಷೆಯಲ್ಲಿ ಹಲವಾರು ಸಾಹಿತ್ಯ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಹಮ್ಮಿಕೊಳ್ಳಲಾಗುವುದು. ಅಕಾಡೆಮಿ ವತಿಯಿಂದ ವಿವಿಧ ವಿಷಯಗಳ ಬಗ್ಗೆ ಪುಸ್ತಕಗಳ ಪ್ರಕಟಣೆಗೊಳಿಸಲಾಗುವುದು ಹಾಗೂ ಎರಡು ವರ್ಷಗಳ ಪ್ರಶಸ್ತಿ ಪ್ರಧಾನ ಸಮಾರಂಭ ಏರ್ಪಡಿಸಲಾಗುವುದು. |
| ಈ | ಅನುದಾನ ಬಳಕೆಯಾಗದೇ ಉಳಿಕೆಯಾಗಲು ಕಾರಣಗಳೇನು? (ವಿವರ ನೀಡುವುದು) | ಪ್ರಸಕ್ತ ಸಾಲಿನಲ್ಲಿ ಯೋಜನೆಗಳಿಗೆ ಒದಗಿಸಿದ ಅನುದಾನವನ್ನು ವರ್ಷಾಂತ್ಯಕ್ಕೆ ಪೂರ್ಣ ವೆಚ್ಚ ಮಾಡಲಾಗುವುದು. |

**ಕಡತ ಸಂಖ್ಯೆ: MWD 10 LMQ 2019**

**(ಬಿ.ಜೆಡ್.ಜಮೀರ್ ಅಹ್ಮದ್ ಖಾನ್)**
ಆಹಾರ ಮತ್ತು ನಾಗರೀಕ ಸರಬರಾಜು
ಹಾಗೂ ಗ್ರಾಹಕರ ವ್ಯವಹಾರಗಳು,
ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರು

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ತನ್ವೀರ್ ಸೇಠ್ (ನರಸಿಂಹರಾಜ) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 702 ಕ್ಕೆ ಅನುಬಂಧ-1

## 2018-19ನೇ ಸಾಲಿಗೆ ಅಲ್ಪಸಂಖ್ಯಾತರ ಇಲಾಖೆಯ ವಿವಿಧ ಯೋಜನೆಗಳಿಗೆ ಮೀಸಲಿಟ್ಟ ಅನುದಾನ ಹಾಗೂ ಜನವರಿ-2019ರ ಅಂತ್ಯಕ್ಕೆ ಖರ್ಚಾದ ಅನುದಾನದ ವಿವರ

(ರೂ. ಲಕ್ಷಗಳಲ್ಲಿ)

| ಕ್ರ.ಸಂ | ಯೋಜನೆಗಳ ವಿವರ | ಮೀಸಲಿಟ್ಟ ಅನುದಾನ | ಜನವರಿ-2019ರ ಅಂತ್ಯಕ್ಕೆ ಖರ್ಚು ಮಾಡಿದ ಅನುದಾನ |
|---|---|---|---|
| 1 | ನಿರ್ದೇಶನ ಮತ್ತು ಆಡಳಿತ ಅಲ್ಪಸಂಖ್ಯಾತರ ನೋಡಲ್ ಕೇಂದ್ರ | 3076.00 | 2805.75 |
| 2 | ಕ್ರಿಶ್ಚಿಯನ್ ಸಮುದಾಯದ ಅಭಿವೃದ್ಧಿ | 16500.00 | 13038.90 |
| 3 | ಅಲ್ಪಸಂಖ್ಯಾತರ ಕಲ್ಯಾಣ ಮದರಸಾದಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣವನ್ನು ಒದಗಿಸುವುದು | 4000.00 | 1998.10 |
| 4 | ಸಮುದಾಯ ಭವನ/ಶಾದಿಮಹಲ್ ನಿರ್ಮಾಣ | 3006.00 | 2254.00 |
| 5 | ಕೌಶಲ್ಯ ಅಭಿವೃದ್ಧಿ ಯೋಜನೆ (ಮಿಷನ್ ಪ್ರೋಗ್ರಾಮ್) ಅಲ್ಪಸಂಖ್ಯಾತರು | 1000.00 | 108.45 |
| 6 | ಸರ್ಕಾರಿ ಅಲ್ಪಸಂಖ್ಯಾತರ ಶಾಲೆಗಳಿಗೆ ಶಿಕ್ಷಣ ಮತ್ತು ಕಲಿಕೆ ಸಾಧನಗಳು | 1000.00 | 885.50 |
| 7 | ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ಉತ್ತೇಜನ | 2660.00 | 2652.43 |
| 8 | ಅಲ್ಪಸಂಖ್ಯಾತರಿಗಾಗಿ ನೂತನ ಹಾಸ್ಟೆಲ್‌ಗಳ ಪ್ರಾರಂಭ | 5058.00 | 4750.12 |
| 9 | ಅಲ್ಪಸಂಖ್ಯಾತರಿಗೆ ವಿದ್ಯಾರ್ಥಿವೇತನ ಮತ್ತು ಶುಲ್ಕ ಮರುಪಾವತಿ | 29000.00 | 9934.77 |
| 10 | ಅಲ್ಪಸಂಖ್ಯಾತರ ವಸತಿ ಶಾಲೆಗಳು | 14906.00 | 13947.65 |
| 11 | ಅಲ್ಪಸಂಖ್ಯಾತರಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ | 700.00 | 700.00 |
| 12 | ಜೈನ್, ಬೌದ್ಧ ಮತ್ತು ಸಿಖ್ ಸಮುದಾಯದ ಅಭಿವೃದ್ಧಿ | 2000.00 | 1849.29 |
| 13 | ಬಿದಾಯಿ | 5500.00 | 5500.00 |
| 14 | ಅಲ್ಪಸಂಖ್ಯಾತರಿಗಾಗಿ ವಸತಿ ನಿಲಯ ಮತ್ತು ವಸತಿ ಶಾಲೆ ಕಟ್ಟಡಗಳ ನಿರ್ಮಾಣ | 20000.00 | 19593.87 |
| 15 | ಮುಖ್ಯಮಂತ್ರಿಯವರ ಅಲ್ಪಸಂಖ್ಯಾತರ ಅಭಿವೃದ್ಧಿ ಯೋಜನೆ | 50000.00 | 42672.70 |
| 16 | ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ವಿದ್ಯಾಸಿರಿ | 3000.00 | 3000.00 |
| 17 | ಖಾಸಗಿ ಸಂಸ್ಥೆಗಳಿಗೆ ಸಹಾಯಾನುದಾನ | 400.00 | 400.00 |
| 18 | ಅಲ್ಪಸಂಖ್ಯಾತರಿಗಾಗಿ ಬಹುವಲಯವಾರು ಅಭಿವೃದ್ಧಿ ಯೋಜನೆ | 6000.00 | 6000.00 |
| | ಒಟ್ಟು | 167806.00 | 132091.53 |

ನಿರ್ದೇಶಕರು,
ಅಲ್ಪಸಂಖ್ಯಾತರ ನಿರ್ದೇಶನಾಲಯ,
ಬೆಂಗಳೂರು.

LALC Q.No. 702



ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು

2018-19ನೇ ಸಾಲಿನ ಆರ್ಥಿಕ ಹಾಗೂ ಭೌತಿಕ ಗುರಿ ಮತ್ತು ಸಾಧನೆ 31-01-2019

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆಯ ಹೆಸರು / ಲೆಕ್ಕ ಶೀರ್ಷಿಕೆ | ನಿಗಮದಲ್ಲಿ ನಿಗದಿಪಡಿಸಿದ ಗುರಿ | | ಆಯವ್ಯಯದಲ್ಲಿ ನಿಗದಿಪಡಿಸಿದ ಮೊತ್ತ | ಸರ್ಕಾರದಿಂದ ಬಿಡುಗಡೆಯಾದ ಮೊತ್ತ | ವೆಚ್ಚ | | ಶೇಕಡ | |
|---|---|---|---|---|---|---|---|---|---|
| | | ಭೌತಿಕ | ಆರ್ಥಿಕ | | | ಭೌತಿಕ | ಆರ್ಥಿಕ | ಗುರಿ | ಬಿಡುಗಡೆ |
| 1 | ಅರಿವು ಸಾಲ ಯೋಜನೆ 4225-03-190-0-03-211 | 24000 | 9210.00 | 9210.00 | 6907.50 | 23400 | 9210.00 | 100.00% | 133.33% |
| 2 | ಗೃಹ ನಿರ್ಮಾಣ - ಮಾರ್ಜಿನ್ ಹಣ ಸಾಲ ಯೋಜನೆ 4225-03-190-0-03-211 | 1000 | 1000.00 | 1000.00 | 750.00 | | 300.00 | | |
| 3 | ಮೈಕ್ರೋ ಸಾಲ ಮತ್ತು ಸಹಾಯಧನ ಯೋಜನೆ 4225-03-190-0-03-211 & 2225-03-102-0-11-059 | 10000 | 1000.00 | 1000.00 | 750.00 | 5000 | 500.00 | 50.00% | 66.67% |
| 4 | ಸ್ವಯಂ ಉದ್ಯೋಗ ಯೋಜನೆ 2225-03-102-0-11-059 | 3599 | 3200.00 | 3200.00 | 2400.00 | 1600 | 2000.00 | 62.50% | 83.33% |
| 5 | ಗಂಗಾ ಕಲ್ಯಾಣ ಯೋಜನೆ 2225-03-102-0-11-059 | 2284 | 4000.00 | 4000.00 | 3000.00 | | | | |
| 6 | ಶ್ರಮಶಕ್ತಿ ಸಾಲ ಯೋಜನೆ 2225-03-102-0-11-059 | 4640 | 2320.00 | 2320.00 | 1740.00 | 2610 | 1305.00 | 56.25% | 75.00% |
| 7 | ಭೂ ಖರೀದಿ ಯೋಜನೆ 4225-03-190-0-03-211 & 2225-03-102-0-11-059 | 50 | 500.00 | 500.00 | 375.00 | 12 | 120.00 | 24.00% | 32.00% |

LALCQ No.702

ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು

2018-19ನೇ ಸಾಲಿನ ಆರ್ಥಿಕ ಹಾಗೂ ಭೌತಿಕ ಗುರಿ ಮತ್ತು ಸಾಧನೆ 31-01-2019

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆಯ ಹೆಸರು / ಲೆಕ್ಕ ಶೀರ್ಷಿಕೆ | ನಿಗಮದಲ್ಲಿ ನಿಗದಿಪಡಿಸಿದ ಗುರಿ | | ಆಯವ್ಯಯದಲ್ಲಿ ನಿಗದಿಪಡಿಸಿದ ಮೊತ್ತ | ಸರ್ಕಾರದಿಂದ ಬಿಡುಗಡೆಯಾದ ಮೊತ್ತ | ವೆಚ್ಚ | | ಶೇಕಡ | |
|---|---|---|---|---|---|---|---|---|---|
| | | ಭೌತಿಕ | ಆರ್ಥಿಕ | | | ಭೌತಿಕ | ಆರ್ಥಿಕ | ಗುರಿ | ಬಿಡುಗಡೆ |
| 8 | ಅಲ್ಪಸಂಖ್ಯಾತರ ರೈತರ ಕಲ್ಯಾಣ ಯೋಜನೆ 4225-03-190-0-03-211 & 2225-03-102-0-11-059 | 400 | 400.00 | 400.00 | 300.00 | 150 | 150.00 | 37.50% | 50.00% |
| 9 | ಪಶುಸಂಗೋಪನೆಗೆ ಉತ್ತೇಜನ 4225-03-190-0-03-211 & 2225 03-102-0-11-059 | 2000 | 800.00 | 800.00 | 600.00 | 1250 | 500.00 | 62.50% | 83.33% |
| 10 | ಅಲ್ಪಸಂಖ್ಯಾತರ ಟ್ಯಾಕ್ಸಿ ಚಾಲಕರ ಕಲ್ಯಾಣ ಯೋಜನೆ (ಸಹಾಯಧನ ಮಾತ್ರ) 2225-03-102-0-11 059 | 633 | 1900.00 | 1900.00 | 1425.00 | 400 | 1200.00 | 63.16% | 84.21% |
| 11 | ಆಟೋ ಸರ್ವಿಸ್, ಆಟೋ ಮೊಬೈಲ್, ಬಿದರಿ ಮತ್ತು ರೇಷ್ಮೆ, ಚನ್ನಪಟ್ಟಣ ಕರಕುಶಲ ಚಟುವಟಿಕೆಗಳಿಗೆ ತರಬೇತಿ ಪ್ರೋತ್ಸಾಹ ಮತ್ತು ಮೂಲಭೂತ ಸೌಕರ್ಯ 4225-03-190-0-03-211 & 2225 03-102-0-11-059 | 630 | 400.00 | 400.00 | 300.00 | 303 | 200.00 | 50.00% | 66.67% |

LALC Q.No.702

ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು

2018-19ನೇ ಸಾಲಿನ ಆರ್ಥಿಕ ಹಾಗೂ ಭೌತಿಕ ಗುರಿ ಮತ್ತು ಸಾಧನೆ 31-01-2019

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆಯ ಹೆಸರು / ಲೆಕ್ಕ ಶೀರ್ಷಿಕೆ | ನಿಗಮದಲ್ಲಿ ನಿಗದಿಪಡಿಸಿದ ಗುರಿ | | ಆಯವ್ಯಯದಲ್ಲಿ ನಿಗದಿಪಡಿಸಿದ ಮೊತ್ತ | ಸರ್ಕಾರದಿಂದ ಬಿಡುಗಡೆಯಾದ ಮೊತ್ತ | ವೆಚ್ಚ | | ಶೇಕಡ | |
|---|---|---|---|---|---|---|---|---|---|
| | | ಭೌತಿಕ | ಆರ್ಥಿಕ | | | ಭೌತಿಕ | ಆರ್ಥಿಕ | ಗುರಿ | ಬಿಡುಗಡೆ |
| 12 | ಪ್ರವಾಸಿ ಸಾಲದ ಯೋಜನೆ (ಸಾಲ) 4225-03-190-0-03-211 | 20 | 200.00 | 200.00 | 150.00 | 5 | 50.00 | | |
| 13 | ಮನೆ ಮಳಿಗೆ ಯೋಜನೆ 4225-03-190-0-03-211 & 2225-03-102-0-11-059 | 30 | 150.00 | 150.00 | 112.50 | | | | |
| 2018-19ನೇ ಸಾಲಿನ ಹೊಸ ಯೋಜನೆ | | | | | | | | | |
| 14 | ವೃತ್ತಿ ಪ್ರೋತ್ಸಾಹ ಯೋಜನೆ (ಹೊಸ ಯೋಜನೆ 2018-19) | **3000** | **3000.00** | **3000.00** | 2250.00 | 1104 | 1104.00 | 36.80% | 49.07% |
| 15 | ಮಹಿಳೆಯರಿಗೆ ಕಾರ್ಯಾರಂಭ (Startup) ಯೋಜನೆ | | **1500.00** | **1500.00** | 1125.00 | | | | |
| | ಒಟ್ಟಾರೆ | **52286** | **29580.00** | **29580.00** | **22185.00** | **35834** | **16639.00** | **56.25%** | **75.00%** |

ವ್ಯವಸ್ಥಾಪಕ ನಿರ್ದೇಶಕರು

ಕರ್ನಾಟಕ ಸರ್ಕಾರ

ಸಂಖ್ಯೆ:ಹೆಚ್‌ಡಿ: 74 :ಎಸ್‌ಎಸ್‌ಟಿ:2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ: 13/2/2019

84 U/S
13/2/19

**ಇವರಿಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
ವಿಧಾನಸೌಧ, ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ವಿಧಾನ ಪರಿಷತ್/ಸಭೆ, ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಪರಿಷತ್/ಸಭೆ ಸದಸ್ಯರಾದ ಶ್ರೀ ಮ್ಯಾಥ್ಯು ಎಸ್. ವಿ. (ಶಾಂತಿನಗರ) ರವರ ಚುಕ್ಕೆ ಗುರುತಿನ/ ಗುರುತಿಲ್ಲದ ಪ್ರಶ್ನೆ ಸಂ: 1083ಗೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಸಲ್ಲಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತು ರವರ ಪತ್ರ ಸಂ: ಪ್ರಶಾಖೆ/15ನೇ.ವಿಸ/3ಅ/ಪ್ರಶ್ನೆ. ಸಂ. 1083/2019

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದನ್ವಯ ಕರ್ನಾಟಕ ವಿಧಾನ ಪರಿಷತ್/ಸಭೆ ಸದಸ್ಯರಾದ ಶ್ರೀ ಮ್ಯಾಥ್ಯು ಎಸ್. ವಿ. (ಶಾಂತಿನಗರ) ರವರ ಚುಕ್ಕೆ ಗುರುತಿನ/ ಗುರುತಿಲ್ಲದ ಪ್ರಶ್ನೆ ಸಂ: 1083ಗೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸುತ್ತಾ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ನಂಬುಗೆಯ,

(ಕೆ.ಪದ್ಮಿನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)
20333254, e-mail:uslo-home@karnataka.gov.in

**ಪ್ರತಿ:**

1.ಮಾನ್ಯ ಉಪ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಯವರಿಗೆ.
2.ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
3.ಸರ್ಕಾರದ ಕಾರ್ಯದರ್ಶಿ(ಪಿಸಿಎಎಸ್) ರವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
4.ಸರ್ಕಾರದ ಉಪ ಕಾರ್ಯದರ್ಶಿ(ಕಾನೂನು & ಸುವ್ಯವಸ್ಥೆ) ರವರ ಆಪ್ತ ಸಹಾಯಕರು, ಒಳಾಡಳಿತ ಇಲಾಖೆ.
5.ಸರ್ಕಾರದ ಅಧೀನ ಕಾರ್ಯದರ್ಶಿ(ಸಮನ್ವಯ), ಒಳಾಡಳಿತ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1083

ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ.(ಶಾಂತಿನಗರ)

ಉತ್ತರಿಸುವ ದಿನಾಂಕ : 13.02.2019

ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜಧಾನಿ ಬೆಂಗಳೂರಿನಲ್ಲಿ ವಿಶೇಷವಾಗಿ ಮಹಿಳಾ ಸುರಕ್ಷತೆಗಾಗಿ ಒಳಾಡಳಿತ ಇಲಾಖೆಯಿಂದ ಹಮ್ಮಿಕೊಂಡಿರುವ ಅಗತ್ಯ ಕ್ರಮಗಳು ಯಾವುವು; | ಬೆಂಗಳೂರಿನಲ್ಲಿ ವಿಶೇಷವಾಗಿ ಮಹಿಳೆಯರ ಸುರಕ್ಷತೆಗಾಗಿ ಒಳಾಡಳಿತ ಇಲಾಖೆಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>➢ ಬೆಂಗಳೂರು ನಗರದಲ್ಲಿ ಮಹಿಳೆಯರ ರಕ್ಷಣೆಗಾಗಿ, ಮಹಿಳಾ ಸಹಾಯವಾಣಿ, ಮತ್ತು ಸ್ಪಂದನ ಸಹಾಯವಾಣಿಗಳನ್ನು ಸ್ಥಾಪಿಸಲಾಗಿದ್ದು, ಈ ಕೇಂದ್ರಗಳು ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿವೆ.<br>➢ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಲ್ಲಿ ಮಹಿಳೆಯರ ದೂರು ವಿಚಾರಣೆ ಬಗ್ಗೆ ಪ್ರತ್ಯೇಕವಾಗಿ ಮಹಿಳಾ ಹೆಲ್ಪ್ ಡೆಸ್ಕ್ ಸ್ಥಾಪಿಸಲಾಗಿದೆ.<br>➢ ದಿನದ 24 ಗಂಟೆಯೂ ಸಹ ಮಹಿಳೆಯರ ಸುರಕ್ಷತೆಗಾಗಿ "ಪಿಂಕ್ ಹೊಯ್ಸಳ" ಎಂಬ ಗಸ್ತುವಾಹನ ಗಸ್ತು ಕಾರ್ಯ ನಿರ್ವಹಿಸುತ್ತಿವೆ.<br>➢ ಮಹಿಳೆಯರು ತಮ್ಮ ಮೇಲಾಗುತ್ತಿರುವ ದೌರ್ಜನ್ಯಗಳ ಬಗ್ಗೆ ಪೊಲೀಸ್ ಠಾಣೆಗಳಲ್ಲಿ ದೂರು ನೀಡಿದ್ದಲ್ಲಿ, ಅವರ ಕುಂದುಕೊರತೆಗಳ ಬಗ್ಗೆ ತಕ್ಷಣ ವಿಚಾರಣೆ ನಡೆಸಿ ಸಮಸ್ಯೆಗಳನ್ನು ಬಗೆಹರಿಸಲಾಗುತ್ತಿದೆ.<br>➢ ಮಹಿಳೆಯರು ಕರ್ತವ್ಯ ನಿರ್ವಹಿಸುವ ಎಲ್ಲಾ ಕಛೇರಿಗಳು, ಸಂಸ್ಥೆಗಳು, ಕಾರ್ಖಾನೆಗಳಲ್ಲಿ ವಿಶೇಷವಾಗಿ ಸುರಕ್ಷತೆಯ ಬಗ್ಗೆ ಮಹಿಳಾ ಸೆಕ್ಯೂರಿಟಿಗಳನ್ನು ನಿಯೋಜಿಸುವಂತೆ ಸೂಚಿಸಲಾಗಿದೆ.<br>➢ ಹಗಲು ಮತ್ತು ರಾತ್ರಿ ವೇಳೆಯಲ್ಲಿ ಕೆಲಸಕ್ಕೆ ಹೋಗುವ ಮಹಿಳೆಯರ ಸುರಕ್ಷತೆಗೆ ಸಕಲ ಮುನ್ನೆಚ್ಚರಿಕೆ ವಹಿಸುವಂತೆ ಸಂಬಂಧಪಟ್ಟ ಕಂಪನಿಗಳು, ಕಾಲ್ ಸೆಂಟರ್‌ಗಳ, ಪಿಜಿ ಸೆಂಟರ್‌ಗಳ ಮಾಲೀಕರಿಗೆ/ವ್ಯವಸ್ಥಾಪಕರಿಗೆ ಸಲಹೆ, ಸೂಚನೆಗಳನ್ನು ನೀಡಲಾಗುತ್ತಿದೆ.<br>➢ ಮಹಿಳೆಯರು ಓಡಾಡುವ ಸ್ಥಳಗಳ ಬಳಿ, ಬಸ್ ನಿಲ್ದಾಣದಲ್ಲಿ, ಶಾಲಾ ಕಾಲೇಜ್‌ಗಳ ಬಳಿ ಸಿಬ್ಬಂದಿಗಳನ್ನು ಪಾಯಿಂಟ್ ಕರ್ತವ್ಯಕ್ಕೆ ನೇಮಕ ಮಾಡಲಾಗುತ್ತಿದ್ದು, ಸದರಿ ಸ್ಥಳಗಳ ಬಳಿ ಹೊಯ್ಸಳ ಹಾಗೂ ಚೇತಾ ವಾಹನಗಳನ್ನು ಗಸ್ತುಮಾಡಿ ಇಂತಹ ಕೃತ್ಯಗಳು ನಡೆಯದಂತೆ ಸೂಕ್ತ ಮುನ್ನೆಚ್ಚರಿಕೆಯನ್ನು ಕೈಗೊಳ್ಳಲಾಗಿದೆ.<br>➢ ಮಹಿಳೆಯರ ಸರಗಳ್ಳತನ ತಡೆಗಟ್ಟುವ ಸಲುವಾಗಿ, ಅರಿವು ಮೂಡಿಸುವ ಕಾರ್ಯಕ್ರಮ ನಡೆಸಲಾಗುತ್ತಿದ್ದು, ಮುಂಜಾಗ್ರತಾ ಕ್ರಮವಾಗಿ, ಪ್ರಮುಖ ಸ್ಥಳಗಳಲ್ಲಿ ಸಿ.ಸಿ.ಟಿ.ವಿ. ಕ್ಯಾಮೆರಾಗಳನ್ನು ಅಳವಡಿಸಲಾಗುತ್ತಿದೆ ಹಾಗೂ ಈ ಸಂಬಂಧ ಕರಪತ್ರಗಳು |

|  |  |  |
|---|---|---|
|  |  | ಹಾಗೂ ಪೋಸ್ಟರ್‌ಗಳ ಮೂಲಕ ಮಹಿಳೆಯರಲ್ಲಿ ಜಾಗೃತಿ ಮೂಡಿಸಲಾಗುತ್ತಿದೆ.<br>➢ ಪೊಲೀಸ್ ಠಾಣಾ ಸರಹದ್ದುಗಳಲ್ಲಿ ಒಂಟಿ ಮಹಿಳೆಯರು ವಾಸಿಸುತ್ತಿರುವ ಮನೆಗಳನ್ನು ಗುರುತಿಸಿ ಸದರಿ ಮನೆಗಳಿಗೆ ಈ-ಟ್ಯಾಗ್ ಮತ್ತು ಪಾಯಿಂಟ್ ಪುಸ್ತಕಗಳನ್ನು ಅಳವಡಿಸಿ ಹಗಲು ಮತ್ತು ರಾತ್ರಿ ವೇಳೆಯಲ್ಲಿ ಗಸ್ತಿನ ಅಧಿಕಾರಿ ಮತ್ತು ಸಿಬ್ಬಂದಿಗಳು, ಚೀತಾ ಮತ್ತು ಹೊಯ್ಸಳ ವಾಹನಗಳು ಆಗ್ಗಿಂದಾಗ್ಗೆ ಭೇಟಿ ನೀಡಲು ಸೂಚಿಸಲಾಗಿದೆ.<br>➢ ಮಹಿಳೆಯರು ವಾಸಿಸುವ ಪಿ.ಜಿ. ಕೇಂದ್ರಗಳಲ್ಲಿ ನಡೆಯುವ ಲೈಂಗಿಕ ಕಿರುಕುಳ ಅತ್ಯಾಚಾರ ಹಾಗೂ ಇತರೆ ಅಪರಾಧಗಳನ್ನು ತಡೆಗಟ್ಟುವ ಸಲುವಾಗಿ ಅನುಸರಿಸಬೇಕಾದ ಕ್ರಮಗಳ ಬಗ್ಗೆ ಸುತ್ತೋಲೆಯನ್ನು ಹೊರಡಿಸಲಾಗಿದೆ. |
| ಆ | ಉದ್ಯೋಗ ನಿಮಿತ್ತ ಕೆಲಸಕಾರ್ಯಗಳಿಗಾಗಿ ಏಕಾಂಗಿ ಸಂಚಾರ ಅನಿವಾರ್ಯವಾಗಿರುವ ದಿನಮಾನಗಳಲ್ಲಿ ಸಂಚಾರವು ಸಹನೀಯವಾಗಿರಿಸುವ ನಿಟ್ಟಿನಲ್ಲಿ ಕೈಗೊಂಡ ಸುರಕ್ಷತಾ ಕ್ರಮಗಳು ಯಾವುವು; | ಮಹಿಳೆಯರು ಉದ್ಯೋಗದ ನಿಮಿತ್ತ ಮತ್ತು ಇತರೆ ಅನಿವಾರ್ಯ ಪರಿಸ್ಥಿತಿಗಳಲ್ಲಿ ಏಕಾಂಗಿಯಾಗಿ ಸಂಚರಿಸಲು ಅನುವಾಗುವಂತೆ ಈ ಕೆಳಕಂಡಂತೆ ಸುರಕ್ಷತಾ ಕ್ರಮಗಳನ್ನು ಅನುಸರಿಸಲಾಗುತ್ತಿದೆ.<br>➢ ರಾತ್ರಿ ಪಾಳಿಯಲ್ಲಿ ಕೆಲಸ ಮಾಡುವ ಎಲ್ಲಾ ಉದ್ಯೋಗಿಗಳಿಗೂ ಕಛೇರಿಗೆ ಕರೆತರಲು ಹಾಗೂ ಬಿಡಲು ಸಾಧ್ಯವಾದ ಮಟ್ಟಿಗೆ ಕಂಪನಿಯವರು ತಮ್ಮದೇ ಸ್ವಂತ ವಾಹನಗಳನ್ನು ಹೊಂದಿರುವುದು, ಸಾಧ್ಯವಾಗದಿದ್ದಲ್ಲಿ ಮಹಿಳಾ ಉದ್ಯೋಗಿಗಳಿಗೆ ತಮ್ಮದೇ ಕಂಪನಿಯ ವಾಹನ ಸೌಕರ್ಯ ಒದಗಿಸುವಂತೆ ಸೂಚಿಸಲಾಗಿದೆ.<br>➢ ಉದ್ಯೋಗಕ್ಕೆ ನೇಮಿಸಿಕೊಳ್ಳುವ ಚಾಲಕರ ಬಗ್ಗೆ ಮಾಹಿತಿ, ಭಾವಚಿತ್ರ ಹಾಗೂ ಬೆರಳು ಮುದ್ರೆಗಳನ್ನು ಪಡೆದುಕೊಳ್ಳುವಂತೆ ಸೂಚಿಸಲಾಗಿದೆ.<br>➢ ಮಹಿಳಾ ನೌಕರರನ್ನು ಕರೆತರುವ ಹಾಗೂ ಬಿಡುವ ವಾಹನಗಳ ವೇಳಾಪಟ್ಟಿ ಹಾಗೂ ಮಾರ್ಗ ಸಂಖ್ಯೆಯನ್ನು ಒಬ್ಬ ಮೇಲ್ವಿಚಾರಣಾ ಅಧಿಕಾರಿಯೇ ನಿರ್ವಹಿಸುವುದು.<br>➢ ಮಹಿಳಾ ಉದ್ಯೋಗಿಗಳ ದೂರವಾಣಿ ಸಂಖ್ಯೆಗಳನ್ನು ಯಾವುದೇ ಅಪರಿಚಿತ ವ್ಯಕ್ತಿಗಳಿಗೆ ನೀಡದಂತೆ ಸೂಚಿಸಲಾಗಿದೆ.<br>➢ ರಾತ್ರಿ ಪಾಳಿಯ ವಾಹನಗಳಿಗೆ ಗಾರ್ಡ್‌ಗಳನ್ನು ಒದಗಿಸಲು ಸೂಚಿಸಲಾಗಿದೆ.<br>➢ ಉದ್ಯೋಗಿಗಳನ್ನು ಕರೆತರುವ ವಾಹನಗಳಿಗೆ ಗಾಜುಗಳು ಪಾರದರ್ಶಕವಾಗಿರುವಂತೆ ಸೂಚಿಸಿದೆ.<br>➢ ಮಹಿಳಾ ಉದ್ಯೋಗಿಗಳನ್ನು ಕರೆದೊಯ್ಯುವ ವಾಹನಗಳಿಗೆ ಜಿ.ಪಿ.ಎಸ್. ಮತ್ತು ಸಿ.ಸಿ.ಟಿ.ವಿ. ಅಳವಡಿಸಲು ಸೂಚಿಸಿದೆ.<br>➢ ಕಂಪನಿಯ ಮೇಲ್ವಿಚಾರಣಾ ಅಧಿಕಾರಿಯು ವಾಹನಗಳನ್ನು ಮಾರ್ಗ ಮಧ್ಯದಲ್ಲಿ ಅನಿರೀಕ್ಷಿತವಾಗಿ ತಪಾಸಣೆ ಮಾಡುವುದು.<br>➢ ಚಾಲಕರು ಮದ್ಯಪಾನ ಮಾಡಿ ವಾಹನ ಚಲಾವಣೆ ಮಾಡದಿರುವಂತೆ ಈ ಬಗ್ಗೆ ಕಂಪನಿಯವರು ಖಚಿತಪಡಿಸಿಕೊಳ್ಳುವಂತೆ ಸೂಚಿಸಲಾಗಿದೆ.<br>➢ ಕ್ಯಾಬ್, ಆಟೋ ಮತ್ತು ಇತರೆ ವಾಹನಗಳಿಗೆ ಚಾಲಕರು ಕಡ್ಡಾಯವಾಗಿ ತಮ್ಮ ಮಾಹಿತಿ ಮತ್ತು ಭಾವಚಿತ್ರವುಳ್ಳ ಡ್ರೈವರ್ಸ್ |

| | | |
|---|---|---|
| | | ಡಿಸ್‌ಪ್ಲೇ ಕಾರ್ಡ್‌ನ್ನು ಪ್ರಯಾಣಿಕರಿಗೆ ಸರಿಯಾಗಿ ಕಾಣುವಂತೆ ಪ್ರದರ್ಶಿಸುವಂತೆ ಸೂಚಿಸಲಾಗಿದ್ದು, ಕ್ರಮ ಜರುಗಿಸಲಾಗಿದೆ.<br>➢ ಮಹಿಳೆಯರ ತುರ್ತು ಸಹಾಯಕ್ಕಾಗಿ, ಮಹಿಳಾ ಸುರಕ್ಷಾ ಆಪ್‌ಗಳನ್ನು ಪರಿಚಯಿಸಲಾಗಿದೆ. |
| ಇ | ಈ ದಿಸೆಯಲ್ಲಿ ಜನಪ್ರಿಯ ಸರ್ಕಾರವು ಆರಂಭಿಸಿರುವ ಪಿಂಕ್ ಟ್ಯಾಕ್ಸಿ ಸೇವೆಯಲ್ಲಿ ಒಳಗೊಂಡಿರುವ ಸುರಕ್ಷತಾ ವಿಧಿವಿಧಾನಗಳು ಯಾವುವು; ಟ್ಯಾಕ್ಸಿಗಳಲ್ಲಿ ಒಂಟಿಯಾಗಿ ಸಂಚರಿಸುವ ಮಹಿಳೆಯರು ಆಪ್ ಆಧಾರಿತ ಟ್ಯಾಕ್ಸಿಗಳಲ್ಲೂ ಸುರಕ್ಷತೆಯು ಇಲ್ಲ ಎಂಬ ವಾತಾವರಣದಲ್ಲಿ ಪಿಂಕ್ ಟ್ಯಾಕ್ಸಿಗಳ ಬಳಕೆಯನ್ನು ಸಹ್ಯಗೊಳಿಸುವ ನಿಟ್ಟಿನಲ್ಲಿ ಸರ್ಕಾರದ ಮಾದರಿ ಎನಿಸುವ ಬದ್ಧತಾ ಕ್ರಮಗಳೇನು; | ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಇಲಾಖೆಯಿಂದ ಮಹಿಳೆಯರಿಂದ ಮಹಿಳೆಯರಿಗಾಗಿ ಎಂಬ ಧ್ಯೇಯದೊಂದಿಗೆ ಪಿಂಕ್ ಟ್ಯಾಕ್ಸಿ ಎಂಬ ಸಾರಿಗೆ ಸೇವೆಯನ್ನು ಆರಂಭಿಸಿರುತ್ತದೆ. 24 ಗಂಟೆಗಳ ಸೇವೆಯನ್ನು ಒದಗಿಸುವಂತೆ ವಿಶೇಷವಾಗಿ ಮಹಿಳೆಯರ ಸುರಕ್ಷತೆಯ ಹಿನ್ನಲೆಯಲ್ಲಿ ತಡರಾತ್ರಿಗಳಲ್ಲಿ ಪ್ರಯಾಣಿಸುವ ಮಹಿಳೆಯರಿಗಾಗಿ ಈ ಸೇವೆಯನ್ನು ಆರಂಭಿಸಲಾಗಿರುತ್ತದೆ.<br>➢ ಈ ಪಿಂಕ್ ಟ್ಯಾಕ್ಸಿಗಳಿಗೆ ಮಹಿಳೆಯರೇ ಚಾಲಕರಾಗಿದ್ದು, ಇವರ ಸೇವೆಯು ಮಹಿಳಾ ಮತ್ತು ಮಕ್ಕಳಿಗಾಗಿ ಸೀಮಿತವಾಗಿರುತ್ತವೆ.<br>➢ ಈ ಪಿಂಕ್ ಟ್ಯಾಕ್ಸಿಗಳಲ್ಲಿ ಸುರಕ್ಷತಾ ಕ್ರಮಗಳ ಅಡಿಯಲ್ಲಿ ಜಿ.ಪಿ.ಆರ್.ಎಸ್. ಟ್ರ್ಯಾಕಿಂಗ್ ಸಿಸ್ಟಮ್‌ನ್ನು ಅಳವಡಿಸಲಾಗಿದೆ.<br>➢ ತುರ್ತು ಸಂದರ್ಭಗಳಿಗಾಗಿ ಎಸ್.ಓ.ಎಸ್. ಸ್ವಿಚ್‌ಗಳನ್ನು ಸಹ ಅಳವಡಿಸಲಾಗಿದೆ.<br>➢ ಮಹಿಳೆಯರ ಸುರಕ್ಷತೆಯನ್ನು ಮನದಲ್ಲಿಟ್ಟುಕೊಂಡು ಮನೆ ಬಾಗಿಲುವರೆಗೂ ಡ್ರಾಪ್ ಮತ್ತು ಪಿಕ್‌ಅಪ್ ಸೇವೆಯನ್ನು ಸುರಕ್ಷತೆಯಾಗಿ ತಲುಪಿಸುವ ವ್ಯವಸ್ಥೆಯನ್ನು ಒದಗಿಸಲಾಗುತ್ತಿದೆ.<br>➢ ಪಿಂಕ್ ಟ್ಯಾಕ್ಸಿ ಚಾಲಕಿಯರಿಂದ ಅಥವಾ ಪ್ರಯಾಣಿಕರಿಂದ ತುರ್ತು ಕರೆ ಬಂದ ಕೂಡಲೇ ಹೊಯ್ಸಳ/ಚೀತಾ ಮತ್ತು ಗಸ್ತು ಅಧಿಕಾರಿಗಳು ಸ್ಥಳಕ್ಕೆ ಭೇಟಿ ನೀಡಿ ಕಾನೂನಿನ ರೀತ್ಯ ಕ್ರಮ ಸಹ ಕೈಗೊಳ್ಳಲಾಗುವುದು. |
| ಈ | ವಿಶೇಷತ: ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಮತ್ತು ಬಹುರಾಷ್ಟ್ರೀಯ ಕಂಪನಿಗಳ ನೌಕರ ವರ್ಗದವರುಗಳಿಗೆ ಅನಿವಾರ್ಯವಾಗಿರುವ ರಾತ್ರಿ ಸಂಚಾರ ವ್ಯವಸ್ಥೆಯನ್ನು ಸುಭದ್ರವಾಗಿಸುವಲ್ಲಿ ಸರ್ಕಾರದ ಪರಿಣಾಮಕಾರಿ ಹಾಗೂ ಮಾದರಿ ಎನಿಸುವ ಕ್ರಮಗಳೇನು? (ವಿವರ ನೀಡುವುದು) ? | ಅಂತರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಪ್ರಸ್ತುತ ಸರ್ಕಾರದ ಕೆ.ಎಸ್.ಟಿ.ಡಿ.ಸಿ. ವತಿಯಿಂದ 10 ಪಿಂಕ್ ಟ್ಯಾಕ್ಸಿಗಳು ಕಾರ್ಯ ನಿರ್ವಹಿಸುತ್ತಿದ್ದು, ಮಹಿಳೆಯರೇ ಚಾಲಕಿಯರಾಗಿದ್ದು, ಕಡ್ಡಾಯವಾಗಿ ಮಹಿಳೆ ಮತ್ತು ಮಕ್ಕಳ ಪ್ರಯಾಣಿಕರಿಗೆ ಸೇವೆ ಒದಗಿಸುತ್ತಿದ್ದು, ಇದುವರೆವಿಗೂ ಯಾವುದೇ ಅಹಿತಕರ ಘಟನೆ ವರದಿಯಾಗಿರುವುದಿಲ್ಲ.<br>ಆದಾಗ್ಯೂ ತುರ್ತು ಸಂದರ್ಭದಲ್ಲಿ ಮಹಿಳಾ ಸುರಕ್ಷಾ ಆಪ್ ಮತ್ತು ಪೊಲೀಸ್ ತುರ್ತು ದೂರವಾಣಿಗಳನ್ನು ಬಳಸುವಂತೆಯೂ ಹಾಗೂ ಸದರಿಯವರುಗಳಿಂದ ತುರ್ತು ಕರೆಗಳನ್ನು ಸ್ವೀಕರಿಸಿದ ಕೂಡಲೇ ಸ್ಪಂದಿಸಲು ಸೂಚನೆಗಳನ್ನು ನೀಡಲಾಗಿರುತ್ತದೆ. |

ಹೆಚ್‌ಡಿ 74 ಎಸ್‌ಎಸ್‌ಟಿ 2019

(ಎಂ.ಬಿ.ಪಾಟೀಲ್)
ಗೃಹ ಸಚಿವರು.

.............................................. .....

ಕರ್ನಾಟಕ ಸರ್ಕಾರ

ಸಂಖ್ಯೆ:ಹೆಚ್‌ಡಿ: 73 :ಎಸ್‌ಎಸ್‌ಟಿ:2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ: 13/2/2019

**ಇವರಿಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
ವಿಧಾನಸೌಧ, ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ವಿಧಾನ ಪರಿಷತ್/ಸಭೆ, ವಿಧಾನಸೌಧ,
ಬೆಂಗಳೂರು.

13/2/19

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಪರಿಷತ್/ಸಭೆ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) ರವರ ಚುಕ್ಕೆ ಗುರುತಿನ/ ಗುರುತಿಲ್ಲದ ಪ್ರಶ್ನೆ ಸಂ: 962ಗೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಸಲ್ಲಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತು ರವರ ಪತ್ರ ಸಂ: ಪ್ರಶಾಂಖೆ/15 ನೇ ವಿಸ/3 ಅ/ ಪ್ರ.ಸಂ. 962/2019

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದನ್ವಯ ಕರ್ನಾಟಕ ವಿಧಾನ ಪರಿಷತ್/ಸಭೆ ಸದಸ್ಯರಾದ ಶ್ರೀ ಹ್ಯಾರಿಸ್ ಎನ್. ಎ. ಶಾಂತಿನಗರ ರವರ ಚುಕ್ಕೆ ಗುರುತಿನ/ ಗುರುತಿಲ್ಲದ ಪ್ರಶ್ನೆ ಸಂ: 962 ಗೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸುತ್ತಾ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ನಂಬುಗೆಯ,

(ಕೆ.ಪದ್ಮಿನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)
20333254, e-mail:uslo-home@karnataka.gov.in

**ಪ್ರತಿ:**

1.ಮಾನ್ಯ ಉಪ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಯವರಿಗೆ.
2.ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
3.ಸರ್ಕಾರದ ಕಾರ್ಯದರ್ಶಿ(ಪಿಸಿಎಎಸ್) ರವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
4.ಸರ್ಕಾರದ ಉಪ ಕಾರ್ಯದರ್ಶಿ(ಕಾನೂನು & ಸುವ್ಯವಸ್ಥೆ) ರವರ ಆಪ್ತ ಸಹಾಯಕರು, ಒಳಾಡಳಿತ ಇಲಾಖೆ.
5.ಸರ್ಕಾರದ ಅಧೀನ ಕಾರ್ಯದರ್ಶಿ(ಸಮನ್ವಯ), ಒಳಾಡಳಿತ ಇಲಾಖೆ.

(61)

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 962 |
| ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) |
| ಉತ್ತರಿಸುವ ದಿನಾಂಕ | : | 13.02.2019 |
| ಉತ್ತರಿಸುವ ಸಚಿವರು | : | ಮಾನ್ಯ ಗೃಹ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರಿನಲ್ಲಿ ವಿಶೇಷವಾಗಿ ಮಹಿಳೆಯರ ಸುರಕ್ಷತೆಗಾಗಿ ಒಳಾಡಳಿತ ಇಲಾಖೆಯಿಂದ ಹಮ್ಮಿಕೊಂಡಿರುವ ಅಗತ್ಯ ಕ್ರಮಗಳಾವುವು; | ಬೆಂಗಳೂರಿನಲ್ಲಿ ವಿಶೇಷವಾಗಿ ಮಹಿಳೆಯರ ಸುರಕ್ಷತೆಗಾಗಿ ಒಳಾಡಳಿತ ಇಲಾಖೆಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>➢ ಬೆಂಗಳೂರು ನಗರದಲ್ಲಿ ಮಹಿಳೆಯರ ರಕ್ಷಣೆಗಾಗಿ, ಮಹಿಳಾ ಸಹಾಯವಾಣಿ, ಮತ್ತು ಸ್ವಂದನ ಸಹಾಯವಾಣಿಗಳನ್ನು ಸ್ಥಾಪಿಸಲಾಗಿದ್ದು, ಈ ಕೇಂದ್ರಗಳು ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿವೆ.<br>➢ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಗಳಲ್ಲಿ ಮಹಿಳೆಯರ ದೂರು ವಿಚಾರಣೆ ಬಗ್ಗೆ ಪ್ರತ್ಯೇಕವಾಗಿ ಮಹಿಳಾ ಹೆಲ್ಪ್ ಡೆಸ್ಕ್ ಸ್ಥಾಪಿಸಲಾಗಿದೆ.<br>➢ ದಿನದ 24 ಗಂಟೆಯೂ ಸಹ ಮಹಿಳೆಯರ ಸುರಕ್ಷತೆಗಾಗಿ "ಪಿಂಕ್ ಹೊಯ್ಸಳ" ಎಂಬ ಗಸ್ತುವಾಹನ ಗಸ್ತು ಕಾರ್ಯ ನಿರ್ವಹಿಸುತ್ತಿವೆ.<br>➢ ಮಹಿಳೆಯರು ತಮ್ಮ ಮೇಲಾಗುತ್ತಿರುವ ದೌರ್ಜನ್ಯಗಳ ಬಗ್ಗೆ ಪೊಲೀಸ್ ಠಾಣೆಗಳಲ್ಲಿ ದೂರು ನೀಡಿದ್ದಲ್ಲಿ, ಅವರ ಕುಂದುಕೊರತೆಗಳ ಬಗ್ಗೆ ತಕ್ಷಣ ವಿಚಾರಣೆ ನಡೆಸಿ ಸಮಸ್ಯೆಗಳನ್ನು ಬಗೆಹರಿಸಲಾಗುತ್ತಿದೆ.<br>➢ ಮಹಿಳೆಯರು ಕರ್ತವ್ಯ ನಿರ್ವಹಿಸುವ ಎಲ್ಲಾ ಕಛೇರಿಗಳು, ಸಂಸ್ಥೆಗಳು, ಕಾರ್ಖಾನೆಗಳಲ್ಲಿ ವಿಶೇಷವಾಗಿ ಸುರಕ್ಷತೆಯ ಬಗ್ಗೆ ಮಹಿಳಾ ಸೆಕ್ಯೂರಿಟಿಗಳನ್ನು ನಿಯೋಜಿಸುವಂತೆ ಸೂಚಿಸಲಾಗಿದೆ.<br>➢ ಹಗಲು ಮತ್ತು ರಾತ್ರಿ ವೇಳೆಯಲ್ಲಿ ಕೆಲಸಕ್ಕೆ ಹೋಗುವ ಮಹಿಳೆಯರ ಸುರಕ್ಷತೆಗೆ ಸಕಲ ಮುನ್ನೆಚ್ಚರಿಕೆ ವಹಿಸುವಂತೆ ಸಂಬಂಧಪಟ್ಟ ಕಂಪನಿಗಳು, ಕಾಲ್ ಸೆಂಟರ್‌ಗಳ, ಪಿಜಿ ಸೆಂಟರ್‌ಗಳ ಮಾಲೀಕರಿಗೆ/ವ್ಯವಸ್ಥಾಪಕರಿಗೆ ಸಲಹೆ, ಸೂಚನೆಗಳನ್ನು ನೀಡಲಾಗುತ್ತಿದೆ.<br>➢ ಮಹಿಳೆಯರು ಓಡಾಡುವ ಸ್ಥಳಗಳ ಬಳಿ, ಬಸ್ ನಿಲ್ದಾಣದಲ್ಲಿ, ಶಾಲಾ ಕಾಲೇಜ್‌ಗಳ ಬಳಿ ಸಿಬ್ಬಂದಿಗಳನ್ನು ಪಾಯಿಂಟ್ ಕರ್ತವ್ಯಕ್ಕೆ ನೇಮಕ ಮಾಡಲಾಗುತ್ತಿದ್ದು, ಸದರಿ ಸ್ಥಳಗಳ ಬಳಿ ಹೊಯ್ಸಳ |

|  |  |  |
| --- | --- | --- |
|  |  | ಹಾಗೂ ಚೀತಾ ವಾಹನಗಳನ್ನು ಗಸ್ತು ಮಾಡಿ ಇಂತಹ ಕೃತ್ಯಗಳು ನಡೆಯದಂತೆ ಸೂಕ್ತ ಮುನ್ನೆಚ್ಚರಿಕೆಯನ್ನು ಕೈಗೊಳ್ಳಲಾಗಿದೆ.<br>➢ ಮಹಿಳೆಯರ ಸರಗಳ್ಳತನ ತಡೆಗಟ್ಟುವ ಸಲುವಾಗಿ, ಅರಿವು ಮೂಡಿಸುವ ಕಾರ್ಯಕ್ರಮ ನಡೆಸಲಾಗುತ್ತಿದ್ದು, ಮುಂಜಾಗ್ರತಾ ಕ್ರಮವಾಗಿ, ಪ್ರಮುಖ ಸ್ಥಳಗಳಲ್ಲಿ ಸಿ.ಸಿ.ಟಿ.ವಿ. ಕ್ಯಾಮೆರಾಗಳನ್ನು ಅಳವಡಿಸಲಾಗುತ್ತಿದೆ ಹಾಗೂ ಈ ಸಂಬಂಧ ಕರಪತ್ರಗಳು ಹಾಗೂ ಪೋಸ್ಟರ್‌ಗಳ ಮೂಲಕ ಮಹಿಳೆಯರಲ್ಲಿ ಜಾಗೃತಿ ಮೂಡಿಸಲಾಗುತ್ತಿದೆ.<br>➢ ಪೊಲೀಸ್ ಠಾಣಾ ಸರಹದ್ದುಗಳಲ್ಲಿ ಒಂಟಿ ಮಹಿಳೆಯರು ವಾಸಿಸುತ್ತಿರುವ ಮನೆಗಳನ್ನು ಗುರುತಿಸಿ ಸದರಿ ಮನೆಗಳಿಗೆ ಈ-ಟ್ಯಾಗ್ ಮತ್ತು ಪಾಯಿಂಟ್ ಪುಸ್ತಕಗಳನ್ನು ಅಳವಡಿಸಿ ಹಗಲು ಮತ್ತು ರಾತ್ರಿ ವೇಳೆಯಲ್ಲಿ ಗಸ್ತಿನ ಅಧಿಕಾರಿ ಮತ್ತು ಸಿಬ್ಬಂದಿಗಳು, ಚೀತಾ ಮತ್ತು ಹೊಯ್ಸಳ ವಾಹನಗಳು ಆಗ್ಗಿಂದಾಗ್ಗೆ ಭೇಟಿ ನೀಡಲು ಸೂಚಿಸಲಾಗಿದೆ.<br>➢ ಮಹಿಳೆಯರು ವಾಸಿಸುವ ಪಿ.ಜಿ. ಕೇಂದ್ರಗಳಲ್ಲಿ ನಡೆಯುವ ಲೈಂಗಿಕ ಕಿರುಕುಳ ಅತ್ಯಾಚಾರ ಹಾಗೂ ಇತರೆ ಅಪರಾಧಗಳನ್ನು ತಡೆಗಟ್ಟುವ ಸಲುವಾಗಿ ಅನುಸರಿಸಬೇಕಾದ ಕ್ರಮಗಳ ಬಗ್ಗೆ ಸುತ್ತೋಲೆಯನ್ನು ಹೊರಡಿಸಲಾಗಿದೆ. |
| ಆ | ಉದ್ಯೋಗ ನಿಮಿತ್ತ ಕೆಲಸಕಾರ್ಯಗಳಿಗಾಗಿ ಏಕಾಂಗಿ ಸಂಚಾರ ಅನಿವಾರ್ಯವಾಗಿರುವ ಈ ದಿನಗಳಲ್ಲಿ ಸಂಚಾರವು ಸಹನೀಯವಾಗಿರಿಸುವ ನಿಟ್ಟಿನಲ್ಲಿ ಕೈಗೊಂಡ ಸುರಕ್ಷತಾ ಕ್ರಮಗಳು ಯಾವುವು; | ಮಹಿಳೆಯರು ಉದ್ಯೋಗದ ನಿಮಿತ್ತ ಮತ್ತು ಇತರೆ ಅನಿವಾರ್ಯ ಪರಿಸ್ಥಿತಿಗಳಲ್ಲಿ ಏಕಾಂಗಿಯಾಗಿ ಸಂಚರಿಸಲು ಅನುವಾಗುವಂತೆ ಈ ಕೆಳಕಂಡಂತೆ ಸುರಕ್ಷತಾ ಕ್ರಮಗಳನ್ನು ಅನುಸರಿಸಲಾಗುತ್ತಿದೆ.<br>➢ ರಾತ್ರಿ ಪಾಳಿಯಲ್ಲಿ ಕೆಲಸ ಮಾಡುವ ಎಲ್ಲಾ ಉದ್ಯೋಗಿಗಳಿಗೂ ಕಛೇರಿಗೆ ಕರೆತರಲು ಹಾಗೂ ಬಿಡಲು ಸಾಧ್ಯವಾದ ಮಟ್ಟಿಗೆ ಕಂಪನಿಯವರು ತಮ್ಮದೇ ಸ್ವಂತ ವಾಹನಗಳನ್ನು ಹೊಂದಿರುವುದು, ಸಾಧ್ಯವಾಗದಿದ್ದಲ್ಲಿ ಮಹಿಳಾ ಉದ್ಯೋಗಿಗಳಿಗೆ ತಮ್ಮದೇ ಕಂಪನಿಯ ವಾಹನ ಸೌಕರ್ಯ ಒದಗಿಸುವಂತೆ ಸೂಚಿಸಲಾಗಿದೆ.<br>➢ ಉದ್ಯೋಗಕ್ಕೆ ನೇಮಿಸಿಕೊಳ್ಳುವ ಚಾಲಕರ ಬಗ್ಗೆ ಮಾಹಿತಿ, ಭಾವಚಿತ್ರ ಹಾಗೂ ಬೆರಳು ಮುದ್ರೆಗಳನ್ನು ಪಡೆದುಕೊಳ್ಳುವಂತೆ ಸೂಚಿಸಲಾಗಿದೆ.<br>➢ ಮಹಿಳಾ ನೌಕರರನ್ನು ಕರೆತರುವ ಹಾಗೂ ಬಿಡುವ ವಾಹನಗಳ ವೇಳಾಪಟ್ಟಿ ಹಾಗೂ ಮಾರ್ಗ ಸಂಖ್ಯೆಯನ್ನು ಒಬ್ಬ ಮೇಲ್ವಿಚಾರಣಾ ಅಧಿಕಾರಿಯೇ ನಿರ್ವಹಿಸುವುದು.<br>➢ ಮಹಿಳಾ ಉದ್ಯೋಗಿಗಳ ದೂರವಾಣಿ ಸಂಖ್ಯೆಗಳನ್ನು ಯಾವುದೇ ಅಪರಿಚಿತ ವ್ಯಕ್ತಿಗಳಿಗೆ ನೀಡದಂತೆ ಸೂಚಿಸಲಾಗಿದೆ.<br>➢ ರಾತ್ರಿ ಪಾಳಿಯ ವಾಹನಗಳಿಗೆ ಗಾರ್ಡ್‌ಗಳನ್ನು ಒದಗಿಸಲು ಸೂಚಿಸಲಾಗಿದೆ.<br>➢ ಉದ್ಯೋಗಿಗಳನ್ನು ಕರೆತರುವ ವಾಹನಗಳಿಗೆ ಗಾಜುಗಳು ಪಾರದರ್ಶಕವಾಗಿರುವಂತೆ ಸೂಚಿಸಿದೆ.<br>➢ ಮಹಿಳಾ ಉದ್ಯೋಗಿಗಳನ್ನು ಕರೆದೊಯ್ಯುವ ವಾಹನಗಳಿಗೆ |

| | | |
|---|---|---|
| | | ಜಿ.ಪಿ.ಎಸ್. ಮತ್ತು ಸಿ.ಸಿ.ಟಿ.ವಿ. ಅಳವಡಿಸಲು ಸೂಚಿಸಿದೆ.<br>➢ ಕಂಪನಿಯ ಮೇಲ್ವಿಚಾರಣಾ ಅಧಿಕಾರಿಯು ವಾಹನಗಳನ್ನು ಮಾರ್ಗ ಮಧ್ಯದಲ್ಲಿ ಅನಿರೀಕ್ಷಿತವಾಗಿ ತಪಾಸಣೆ ಮಾಡುವುದು.<br>➢ ಚಾಲಕರು ಮಧ್ಯಪಾನ ಮಾಡಿ ವಾಹನ ಚಲಾವಣೆ ಮಾಡದಿರುವಂತೆ ಈ ಬಗ್ಗೆ ಕಂಪನಿಯವರು ಖಚಿತಪಡಿಸಿಕೊಳ್ಳುವಂತೆ ಸೂಚಿಸಲಾಗಿದೆ.<br>➢ ಕ್ಯಾಬ್, ಆಟೋ ಮತ್ತು ಇತರೆ ವಾಹನಗಳಿಗೆ ಚಾಲಕರು ಕಡ್ಡಾಯವಾಗಿ ತಮ್ಮ ಮಾಹಿತಿ ಮತ್ತು ಭಾವಚಿತ್ರವುಳ್ಳ ಡ್ರೈವರ್ಸ್ ಡಿಸ್‌ಪ್ಲೇ ಕಾರ್ಡ್‌ನ್ನು ಪ್ರಯಾಣಿಕರಿಗೆ ಸರಿಯಾಗಿ ಕಾಣುವಂತೆ ಪ್ರದರ್ಶಿಸುವಂತೆ ಸೂಚಿಸಲಾಗಿದ್ದು, ಕ್ರಮ ಜರುಗಿಸಲಾಗಿದೆ.<br>➢ ಮಹಿಳೆಯರ ತುರ್ತು ಸಹಾಯಕ್ಕಾಗಿ, ಮಹಿಳಾ ಸುರಕ್ಷಾ ಆಪ್‌ಗಳನ್ನು ಪರಿಚಯಿಸಲಾಗಿದೆ. |
| ಇ | **ಈ** ದಿಸೆಯಲ್ಲಿ ಸರ್ಕಾರವು ಆರಂಭಿಸಿರುವ **ಪಿಂಕ್** ಟ್ಯಾಕ್ಸಿ ಸೇವೆಯಲ್ಲಿ ಒಳಗೊಂಡಿರುವ ಸುರಕ್ಷತಾ ವಿಧಿವಿಧಾನಗಳು ಯಾವುವು; ಟ್ಯಾಕ್ಸಿಗಳಲ್ಲಿ ಒಂಟಿಯಾಗಿ ಸಂಚರಿಸುವ ಮಹಿಳೆಯರು ಆಪ್ ಆಧಾರಿತ ಟ್ಯಾಕ್ಸಿಗಳಲ್ಲೂ ಸುರಕ್ಷತೆಯು ಇಲ್ಲ ಎಂಬ ವಾತಾವರಣದಲ್ಲಿ **ಪಿಂಕ್** ಟ್ಯಾಕ್ಸಿಗಳ ಬಳಕೆಯನ್ನು ಸಹ್ಯಗೊಳಿಸುವ ನಿಟ್ಟಿನಲ್ಲಿ ಸರ್ಕಾರದ ಮಾದರಿ ಎನಿಸುವ ಬದ್ಧತಾ ಕ್ರಮಗಳೇನು; | ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಕರ್ನಾಟಕ ರಾಜ್ಯಪ್ರವಾಸೋದ್ಯಮ ಇಲಾಖೆಯಿಂದ ಮಹಿಳೆಯರಿಂದ ಮಹಿಳೆಯರಿಗಾಗಿ ಎಂಬ ಧ್ಯೇಯದೊಂದಿಗೆ ಪಿಂಕ್ ಟ್ಯಾಕ್ಸಿ ಎಂಬ ಸಾರಿಗೆ ಸೇವೆಯನ್ನು ಆರಂಭಿಸಿರುತ್ತದೆ. 24 ಗಂಟೆಗಳ ಸೇವೆಯನ್ನು ಒದಗಿಸುವಂತೆ ವಿಶೇಷವಾಗಿ ಮಹಿಳೆಯರ ಸುರಕ್ಷತೆಯ ಹಿನ್ನೆಲೆಯಲ್ಲಿ ತಡರಾತ್ರಿಗಳಲ್ಲಿ ಪ್ರಯಾಣಿಸುವ ಮಹಿಳೆಯರಿಗಾಗಿ ಈ ಸೇವೆಯನ್ನು ಆರಂಭಿಸಲಾಗಿರುತ್ತದೆ.<br>➢ ಈ ಪಿಂಕ್ ಟ್ಯಾಕ್ಸಿಗಳಿಗೆ ಮಹಿಳೆಯರೇ ಚಾಲಕರಾಗಿದ್ದು, ಇವರ ಸೇವೆಯು ಮಹಿಳಾ ಮತ್ತು ಮಕ್ಕಳಿಗಾಗಿ ಸೀಮಿತವಾಗಿರುತ್ತವೆ.<br>➢ ಈ ಪಿಂಕ್ ಟ್ಯಾಕ್ಸಿಗಳಲ್ಲಿ ಸುರಕ್ಷತಾ ಕ್ರಮಗಳ ಅಡಿಯಲ್ಲಿ ಜಿ.ಪಿ.ಆರ್.ಎಸ್. ಟ್ರ್ಯಾಕಿಂಗ್ ಸಿಸ್ಟಮ್‌ನ್ನು ಅಳವಡಿಸಲಾಗಿದೆ.<br>➢ ತುರ್ತು ಸಂದರ್ಭಗಳಿಗಾಗಿ ಎಸ್.ಓ.ಎಸ್. ಸ್ವಿಚ್‌ಗಳನ್ನು ಸಹ ಅಳವಡಿಸಲಾಗಿದೆ.<br>➢ ಮಹಿಳೆಯರ ಸುರಕ್ಷತೆಯನ್ನು ಮನದಲ್ಲಿಟ್ಟುಕೊಂಡು ಮನೆ ಬಾಗಿಲುವರೆಗೂ ಡ್ರಾಪ್ ಮತ್ತು ಪಿಕ್‌ಅಪ್ ಸೇವೆಯನ್ನು ಸುರಕ್ಷತೆಯಾಗಿ ತಲುಪಿಸುವ ವ್ಯವಸ್ಥೆಯನ್ನು ಒದಗಿಸಲಾಗುತ್ತಿದೆ.<br>➢ ಪಿಂಕ್ ಟ್ಯಾಕ್ಸಿ ಚಾಲಕಿಯರಿಂದ ಅಥವಾ ಪ್ರಯಾಣಿಕರಿಂದ ತುರ್ತು ಕರೆ ಬಂದ ಕೂಡಲೇ ಹೊಯ್ಸಳ/ಚೀತಾ ಮತ್ತು ಗಸ್ತು ಅಧಿಕಾರಿಗಳು ಸ್ಥಳಕ್ಕೆ ಭೇಟಿ ನೀಡಿ ಕಾನೂನಿನ ರೀತ್ಯ ಕ್ರಮ ಸಹ ಕೈಗೊಳ್ಳಲಾಗುವುದು. |
| ಈ | ವಿಶೇಷವಾಗಿ ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಮತ್ತು ಬಹುರಾಷ್ಟ್ರೀಯ ಕಂಪನಿಗಳ ನೌಕರ ವರ್ಗದವರುಗಳಿಗೆ ಅನಿವಾರ್ಯವಾಗಿರುವ ರಾತ್ರಿ ಸಂಚಾರ ವ್ಯವಸ್ಥೆಯನ್ನು ಸುಭದ್ರವಾಗಿಸುವಲ್ಲಿ ಸರ್ಕಾರದ ಪರಿಣಾಮಕಾರಿ ಹಾಗೂ | ಅಂತರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಪ್ರಸ್ತುತ ಸರ್ಕಾರದ ಕೆ.ಎಸ್.ಟಿ.ಡಿ.ಸಿ. ವತಿಯಿಂದ 10 ಪಿಂಕ್ ಟ್ಯಾಕ್ಸಿಗಳು ಕಾರ್ಯ ನಿರ್ವಹಿಸುತ್ತಿದ್ದು, ಮಹಿಳೆಯರೇ ಚಾಲಕಿಯರಾಗಿದ್ದು, ಕಡ್ಡಾಯವಾಗಿ ಮಹಿಳೆ ಮತ್ತು ಮಕ್ಕಳ ಪ್ರಯಾಣಿಕರಿಗೆ ಸೇವೆ ಒದಗಿಸುತ್ತಿದ್ದು, ಇದುವರೆವಿಗೂ ಯಾವುದೇ ಅಹಿತಕರ ಘಟನೆ ವರದಿಯಾಗಿರುವುದಿಲ್ಲ. |

| | ಮಾದರಿ ಎನಿಸುವ ಕ್ರಮಗಳೇನು? (ವಿವರ ನೀಡುವುದು) | ಆದಾಗ್ಯೂ ತುರ್ತು ಸಂದರ್ಭದಲ್ಲಿ ಮಹಿಳಾ ಸುರಕ್ಷಾ ಆಪ್ ಮತ್ತು ಪೊಲೀಸ್ ತುರ್ತು ದೂರವಾಣಿಗಳನ್ನು ಬಳಸುವಂತೆಯೂ ಹಾಗೂ ಸದರಿಯವರುಗಳಿಂದ ತುರ್ತು ಕರೆಗಳನ್ನು ಸ್ವೀಕರಿಸಿದ ಕೂಡಲೇ ಸ್ಪಂದಿಸಲು ಸೂಚನೆಗಳನ್ನು ನೀಡಲಾಗಿರುತ್ತದೆ. |
|---|---|---|

ಹೆಚ್‌ಡಿ 73 ಎಸ್‌ಎಸ್‌ಟಿ 2019

(ಎಂ.ಬಿ.ಪಾಟೀಲ)
**ಗೃಹ ಸಚಿವರು.**

**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 24 ಎಹೆಚ್‌ಡಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:12.02.2019

**ಇವರಿಂದ:**
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:-** ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ. ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:867ಕ್ಕೆ ಉತ್ತರ ಕಳುಹಿಸುವ ಬಗ್ಗೆ.

**ಉಲ್ಲೇಖ:-** ತಮ್ಮ ಪತ್ರ ಸಂಖ್ಯೆ:ಪ್ರಶಾವಿಸ:15ನೇವಿಸ:3ಅ:ಪ್ರ.ಸಂ:867/2019 ದಿನಾಂಕ:05.02.2019

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ. ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:867ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಎ. ಶ್ರೀನಿಧಿ)
ಶಾಖಾಧಿಕಾರಿ
ನಗರಾಭಿವೃದ್ಧಿ ಇಲಾಖೆ.
(ಮಹಾನಗರಪಾಲಿಕೆ-2)

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 867 |
| ಸದಸ್ಯರ ಹೆಸರು | : | ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) |
| ಉತ್ತರಿಸಬೇಕಾದ ದಿನಾಂಕ | : | 13.02.2019 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ನಗರಾಭಿವೃದ್ಧಿ ಮತ್ತು ವಸತಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಹುಬ್ಬಳ್ಳಿ-ಧಾರವಾಡ ವಿಧಾನಸಭಾ ಮತಕ್ಷೇತ್ರದಲ್ಲಿನ ಹಳೇ ಹುಬ್ಬಳ್ಳಿಯಲ್ಲಿನ ಕಿರಿಯದಾಗಿರುವ ರಸ್ತೆಯನ್ನು ಅಗಲೀಕರಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ ಕೈಗೊಂಡ ಕ್ರಮಗಳೇನು; | ಹುಬ್ಬಳ್ಳಿ-ಧಾರವಾಡ ಮಹಾನಗರ ಪ್ರಾಧಿಕಾರದ ವತಿಯಿಂದ ಹೊರಡಿಸಲಾದ ಮಹಾಯೋಜನೆ ಪರಿಷ್ಕೃತ-1 ರಲ್ಲಿ ಹಳೇ ಹುಬ್ಬಳ್ಳಿಯ ಕಿರಿದಾದ ಕೆಲವೊಂದು ಮುಖ್ಯ ರಸ್ತೆಗಳನ್ನು ಅಗಲೀಕರಣ ಮಾಡಲು ಪ್ರಸ್ತಾಪಿಸಲಾಗಿರುತ್ತದೆ. ಆದರೆ, ರಸ್ತೆ ಅಗಲೀಕರಣ ಮಾಡುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| ಆ) | ಕಿರಿದಾದ ರಸ್ತೆಯಿಂದ ಸಂಚಾರಕ್ಕೆ ತೊಂದರೆಯಾಗುತ್ತಿರುವುದರಿಂದ ಮೇಲು ಸೇತುವೆ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ ಈ ಬಗ್ಗೆ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಮೇಲು ಸೇತುವೆ ನಿರ್ಮಾಣ ಮಾಡುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

ಸಂಖ್ಯೆ:ನಅಇ 24 ಎಹೆಚ್‌ಡಿ 2019

(ಯು.ಟಿ. ಖಾದರ್)
ನಗರಾಭಿವೃದ್ಧಿ ಮತ್ತು ವಸತಿ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 10 ಎಸಿಬಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:12.02.2019

22

415
13/02/19

**ಇವರಿಂದ:**
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:-** ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ. ಅನಿಲ್ ಎಸ್.ಬೆನಕೆ (ಬೆಳಗಾಂ ಉತ್ತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:861ಕ್ಕೆ ಉತ್ತರ ಕಳುಹಿಸುವ ಬಗ್ಗೆ.

**ಉಲ್ಲೇಖ:-** ತಮ್ಮ ಪತ್ರ ಸಂಖ್ಯೆ:ಪ್ರಶಾವಿಸ:15ನೇವಿಸ:3ಅ:ಪ್ರ.ಸಂ:861/2019 ದಿನಾಂಕ:05.02.2019

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ. ಅನಿಲ್ ಎಸ್. ಬೆನಕೆ (ಬೆಳಗಾಂ ಉತ್ತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:861ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಎ. ಶ್ರೀನಿಧಿ)
ಶಾಖಾಧಿಕಾರಿ
ನಗರಾಭಿವೃದ್ಧಿ ಇಲಾಖೆ.
(ಮಹಾನಗರಪಾಲಿಕೆ-2)

# ಕರ್ನಾಟಕ ವಿಧಾನ ಸಭೆ

(1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 861
(2) ಸದಸ್ಯರ ಹೆಸರು : ಶ್ರೀ ಅನಿಲ್ ಎಸ್. ಬೆನಕೆ (ಬೆಳಗಾಂ ಉತ್ತರ)
(3) ಉತ್ತರಿಸುವ ದಿನಾಂಕ : 13-02-2019
(4) ಉತ್ತರಿಸುವ ಸಚಿವರು : ನಗರಾಭಿವೃದ್ಧಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ನಗರದಲ್ಲಿ ಸಾರ್ವಜನಿಕರಿಗೆ ಅನಾನುಕೂಲವಾಗುವಂತೆ ಕಸಾಯಿ ಖಾನೆಗಳನ್ನು ನಿರ್ಮಿಸಲು ಅನುಮತಿ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ |
| ಆ) | ಹಾಗಿದ್ದಲ್ಲಿ, ಸದರಿ ಕಸಾಯಿ ಖಾನೆಯನ್ನು ನಡೆಸುತ್ತಿರುವವರ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮವೇನು; | ಅನ್ವಯಿಸುವುದಿಲ್ಲ. |
| ಇ) | ಸದರಿ ಕಸಾಯಿ ಖಾನೆಗಳನ್ನು ನಡೆಸಲು ನೀಡಿರುವ ಅನುಮತಿ ರದ್ದುಪಡಿಸಲು ಸರ್ಕಾರ ತೆಗೆದುಕೊಂಡ ಕ್ರಮವೇನು (ವಿವರ ನೀಡುವುದು)? | ಅನ್ವಯಿಸುವುದಿಲ್ಲ. |

ಸಂಖ್ಯೆ: ನಅಇ 10 ಎಸಿಬಿ 2019

(ಯು.ಟಿ. ಖಾದರ್)
ನಗರಾಭಿವೃದ್ಧಿ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 18 ಬೆಂರೂಪ್ರಾ 2019

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 12.02.2019

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ನಗರಾಭಿವೃದ್ಧಿಇಲಾಖೆ.

**ಇವರಿಗೆ:**
ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ,
ವಿಧಾನಸೌಧ.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ.(ಬಂಗಾರಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 710ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 710ಕ್ಕೆ ನೀಡಬೇಕಾಗಿರುವ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ನಾಗರಾಜ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಕರ್ನಾಟಕ ವಿಧಾನಸಭೆ**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 710
**ಸದಸ್ಯರ ಹೆಸರು** : ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ)
**ಉತ್ತರಿಸುವ ದಿನಾಂಕ** : 13/02/2019
**ಉತ್ತರಿಸಬೇಕಾದವರು** : ಮಾನ್ಯ ನಗರಾಭಿವೃದ್ಧಿ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಜಿಲ್ಲೆ ಕೆ.ಜಿ.ಎಫ್ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಳೆದ 3 ವರ್ಷಗಳಲ್ಲಿ ಸಂಗ್ರಹವಾದ ಶುಲ್ಕ / ತೆರಿಗೆ ಹಣ ಎಷ್ಟು; (ವರ್ಷವಾರು ವಿವರ ನೀಡುವುದು) | ವಿವರಗಳನ್ನು ಅನುಬಂಧ-ಎ ರಲ್ಲಿ ಒದಗಿಸಲಾಗಿದೆ. |
| ಆ) | ಸಂಗ್ರಹವಾದ ಹಣವನ್ನು ಯಾವ ಯಾವ ಉದ್ದೇಶಗಳಿಗೆ ಬಳಸಲಾಗಿದೆ? (ವಿವರಗಳನ್ನು ನೀಡುವುದು) | ವಿವರಗಳನ್ನು ಅನುಬಂಧ-ಬಿ ರಲ್ಲಿ ಒದಗಿಸಲಾಗಿದೆ. |

**ಸಂಖ್ಯೆ: ನಅಇ 18 ಬೆಂರೂಪ್ರಾ 2019**

(ಯು.ಟಿ. ಖಾದರ್)
ನಗರಾಭಿವೃದ್ಧಿ ಸಚಿವರು

ಅನುಬಂಧ - ೧

# ಕೆ.ಜಿ.ಎಫ್. ನಗರಾಭಿವೃದ್ಧಿ ಪ್ರಾಧಿಕಾರದ

## 2015-16ನೇ ಸಾಲಿನಲ್ಲಿ ಸಂಗ್ರಹವಾದ ಶುಲ್ಕ/ತೆರಿಗೆ ಹಣದ ವಿವರಗಳು

| ಕ್ರ. ಸಂ. | ಜಮಾಗಳ ವಿವರ | ಮೊತ್ತ |
|---|---|---|
| 1 | ಪರಿಶೋಧನಾ ಶುಲ್ಕ | 959151.00 |
| 2 | ಉತ್ತಮತ್ತೆ ಶುಲ್ಕ (ನಿವೇಶನ) | 453786.00 |
| 3 | ಉತ್ತಮತ್ತೆ ಶುಲ್ಕ (ಕಟ್ಟಡ) | 41394.00 |
| 4 | ಕೊಳಚೆ ನಿರ್ಮೂಲನಾ ಶುಲ್ಕ | 286945.00 |
| 5 | ದಂಡ | 4665845.00 |
| 6 | ಹೆಚ್ಚಿನ ನಕ್ಷೆ ಶುಲ್ಕ | 26516.00 |
| 7 | ಅರ್ಜಿ ಶುಲ್ಕ | 460.00 |
| 8 | ಕೆರೆ ಅಭಿವೃದ್ಧಿ ಶುಲ್ಕ | 3213462.00 |
| 9 | ಇಂಜನಿಯರ್ ನೊಂದಣಿ ಶುಲ್ಕ | 15000.00 |
| 10 | ಮಾಹಿತಿ ಹಕ್ಕು ಶುಲ್ಕ | 856.00 |
| 11 | ಖಾತೆ ಶುಲ್ಕ | 7000.00 |
| 12 | ಕಂದಾಯ ಶುಲ್ಕ | 88842.00 |
| 13 | ಸಿ.ಎ. ನಿವೇಶನದ ಶುಲ್ಕ | 1550875.00 |
| 14 | ಬ್ಯಾಂಕ್ ಬಡ್ಡಿ / ಟಿಡಿಎಸ್ | 422742.00 |
| 15 | ಮೇಲ್ವಿಚಾರಣೆ ಶುಲ್ಕ | 16580.00 |
| 16 | ನಿಶ್ಚಿತ ಠೇವಣಿ ಹಿಂಪಡೆದಿರುವುದು | 28473780.00 |
| 17 | ನಿಶ್ಚಿತ ಠೇವಣಿ ಪಿಜಿಬಿ ಖಾತೆಯಿಂದ ಎಸ್‌ಬಿಎಂ ಖಾತೆಗೆ ವರ್ಗಾವಣೆ | 1000000.00 |
| 18 | ನಗದೀಕರಣ ಆಗದ ಚೆಕ್ ಮೊತ್ತ ಮರು ಜಮೆ | 70000.00 |
| 19 | ನೀರು ಸರಬರಾಜು ಶುಲ್ಕ | 5800.00 |
| 20 | ಭೂ ವಿಭಜನೆ ಶುಲ್ಕ | 360.00 |
| 21 | ಬ್ಯಾಂಕ್ ಬಡ್ಡಿ | 104947.00 |
| 22 | ವಿನ್ಯಾಸ ರೂಪಿಸಿದ ಶುಲ್ಕ | 44500.00 |
| 23 | ಭೂ ಉಪಯೋಗ ಬದಲಾವಣೆ ಶುಲ್ಕ | 11350.00 |
| 24 | ನಿವೇಶನ ಬೇಡಿಕೆಯ ಸಮೀಕ್ಷೆಯ ಅರ್ಜಿ ಶುಲ್ಕ | 3450.00 |
| 25 | ನಿವೇಶನ ಜೋಡಣೆ ಶುಲ್ಕ | 900.00 |
| | ಒಟ್ಟು | 41464541.00 |

ಆಯುಕ್ತರು
ನಗರಾಭಿವೃದ್ಧಿ ಪ್ರಾಧಿಕಾರ
ಕೆ.ಜಿ.ಎಫ್.

## ಕೆ.ಜಿ.ಎಫ್. ನಗರಾಭಿವೃದ್ಧಿ ಪ್ರಾಧಿಕಾರದ

### 2016-17ನೇ ಸಾಲಿನಲ್ಲಿ ಸಂಗ್ರಹವಾದ ಶುಲ್ಕ/ತೆರಿಗೆ ಹಣದ ವಿವರಗಳು

| ಕ್ರ. ಸಂ. | ಜಮಾಗಳ ವಿವರ | ಮೊತ್ತ |
|---|---|---|
| 1 | ಉತ್ತಮತೆ ಶುಲ್ಕ (ಕಟ್ಟಡ) | 11550.00 |
| 2 | ಕೊಳವೆ ನಿರ್ಮೂಲನಾ ಶುಲ್ಕ | 104480.00 |
| 3 | ಕೆರೆ ಅಭಿವೃದ್ಧಿ ಶುಲ್ಕ | 3014160.00 |
| 4 | ಶೇ 4 ರ ಮೇಲ್ವಿಚಾರಣೆ ಶುಲ್ಕ | 835060.00 |
| 5 | ಖಾತೆ ಬದಲಾವಣೆ ಶುಲ್ಕ | 69898.00 |
| 6 | ಕಂದಾಯ ಶುಲ್ಕ | 112639.00 |
| 7 | ಇಂಜಿನಿಯರ್ ನೋಂದಣಿ ಶುಲ್ಕ | 10500.00 |
| 8 | ಭೂ ಉಪಯೋಗ ಬದಲಾವಣೆ ಶುಲ್ಕ | 303690.00 |
| 9 | ಅರ್ಜಿ ಶುಲ್ಕ | 4000.00 |
| 10 | ಹೆಚ್ಚಿನ ನಕ್ಷೆ ಶುಲ್ಕ | 59400.00 |
| 11 | ಪರಿಶೋಧನಾ ಶುಲ್ಕ | 1021540.00 |
| 12 | ಕಟ್ಟಡ ಕಂದಾಯ ಶುಲ್ಕ | 14719.00 |
| 13 | ಮೂಲೆ ನಿವೇಶನ ಮಾರಾಟ | 12983818.00 |
| 14 | ಮಾಹಿತಿ ಹಕ್ಕು ಶುಲ್ಕ | 400.00 |
| 15 | ಬ್ಯಾಂಕ್ ಬಡ್ಡಿ | 151313.00 |
| 16 | ಹೂಡಿಕೆ ನಗದೀಕರಣ | 24781955.00 |
| 17 | ಉತ್ತಮತ್ತೆ (ನಿವೇಶನ ಶುಲ್ಕ) | 262500.00 |
| 18 | ದಂಡ | 8254645.00 |
| | ಒಟ್ಟು | **51996267.00** |

## ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 28 ಎಂಎಸ್ಐ 2019

ಕರ್ನಾಟಕ ಸರ್ಕಾರ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು, ದಿನಾಂಕ:12-02-2019.

182 U/S
13/2/19

ಇಂದ
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ
ವಿಕಾಸಸೌದ, ಬೆಂಗಳೂರು.

ಇವರಿಗೆ,
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ವಿಧಾನಸಭೆಯ ಸದಸ್ಯರಾದ ಶ್ರೀ ಸೋಮಶೇಖರ್ ಎಸ್.ಟಿ. (ಯಶವಂತಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 221 ಉತ್ತರ ಒದಗಿಸುವ ಬಗ್ಗೆ.

ಉಲ್ಲೇಖ: ಸಂಖ್ಯೆ:ಪ್ರಶಾವಿಸ/15ನೇವಿಸ/3ಅ/ಪ್ರ.ಸಂ.221/2019, ದಿನಾಂಕ:30-01-2019.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ ಸೋಮಶೇಖರ್ ಎಸ್.ಟಿ. (ಯಶವಂತಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:221 ಕ್ಕೆ ಸಂಬಂಧಿಸಿದ ಉತ್ತರದ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಕೆ.ಎಸ್. ಜಗದೀಶರೆಡ್ಡಿ)
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 221 |
| ಸದಸ್ಯರ ಹೆಸರು | : | ಶ್ರೀ ಸೋಮಶೇಖರ್ ಎಸ್.ಟಿ. (ಯಶವಂತಪುರ) |
| ಉತ್ತರಿಸಬೇಕಾದ ದಿನಾಂಕ | : | 13-02-2019 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಯವರು |

****

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಯಶವಂತಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಜಲಮಂಡಳಿಯ ಪೈಪ್‌ಲೈನ್ ತಿಪ್ಪಗೊಂಡನಹಳ್ಳಿ-ಬೆಂಗಳೂರು ಹಾಗೂ ಟಿ.ಕೆ.ಹಳ್ಳಿ-ಬೆಂಗಳೂರು ರಸ್ತೆಯು ಎಷ್ಟು ಕಿ.ಮೀ. ವ್ಯಾಪ್ತಿಗೆ ಒಳಪಟ್ಟಿದೆ; | ಯಶವಂತಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬೆಂಗಳೂರು ಜಲಮಂಡಳಿಯ ಪೈಪ್‌ಲೈನ್ ಟಿ.ಕೆ.ಹಳ್ಳಿ-ಬೆಂಗಳೂರು ರಸ್ತೆಯಲ್ಲಿ 11 ಕಿ.ಮೀ ರಷ್ಟು ಒಳಪಡುತ್ತದೆ ಮತ್ತು ತಿಪ್ಪಗೊಂಡನಹಳ್ಳಿ-ಬೆಂಗಳೂರು ರಸ್ತೆಯಲ್ಲಿ 13 ಕಿ.ಮೀ ರಷ್ಟು ಒಳಪಡುತ್ತದೆ. |
| ಆ | ಈ ಪ್ರದೇಶದ ರಸ್ತೆಯು ಹದಗೆಟ್ಟಿದ್ದರೂ ಅಭಿವೃದ್ಧಿಪಡಿಸದೆ ಇರಲು ಕಾರಣವೇನು; | ಬೆಂಗಳೂರು ಜಲಮಂಡಳಿಯ ಪೈಪ್‌ಲೈನ್ ಟಿ.ಕೆ.ಹಳ್ಳಿ-ಬೆಂಗಳೂರು ರಸ್ತೆಯನ್ನು ಕಾವೇರಿ 5ನೇ ಹಂತದ ಕೊಳವೆ ಮಾರ್ಗ ಯೋಜನೆಯನ್ನು ತೆಗೆದುಕೊಳ್ಳುತ್ತಿರುವ ಕಾರಣ ಅಭಿವೃದ್ಧಿ ಪಡಿಸಲು ಸಾಧ್ಯವಾಗಿರುವುದಿಲ್ಲ ಮತ್ತು ತಿಪ್ಪಗೊಂಡನಹಳ್ಳಿ-ಬೆಂಗಳೂರು ರಸ್ತೆಯನ್ನು, ತಿಪ್ಪಗೊಂಡನಹಳ್ಳಿ ಕೆರೆ ಪುನಃಶ್ಚೇತನ ಯೋಜನೆಯನ್ನು ತೆಗೆದುಕೊಳ್ಳುತ್ತಿರುವ ಕಾರಣ ಅಭಿವೃದ್ಧಿಪಡಿಸಲು ಸಾಧ್ಯವಾಗಿರುವುದಿಲ್ಲ. |
| ಇ | ಬಿಬಿಎಂಪಿ ಪ್ರದೇಶದಲ್ಲಿ ಹಾದು ಹೋಗುವ ಪೈಪ್‌ಲೈನನ್ನು ಹಸ್ತಾಂತರಿಸಿ ಪಾರ್ಕ್ ನಿರ್ಮಿಸಲು ಅನುಮತಿ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ವಿವರ ನೀಡುವುದು) | ಇಲ್ಲ. |

ಸಂಖ್ಯೆ: ನಅಇ 28 ಎಂಎನ್‌ಜಿ 2019

(ಡಾ|| ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ: ಲೋಇ 03 ಸಿಆರ್‌ಎಂ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 12-02-2019.

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಗೂಳಿಹಟ್ಟಿ ಡಿ ಶೇಖರ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 779 ಕ್ಕೆ ಉತ್ತರ ಒದಗಿಸುವ ಬಗ್ಗೆ.

ಪ್ರಸ್ತಾವಿತ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಶ್ರೀ ಗೂಳಿಹಟ್ಟಿ ಡಿ ಶೇಖರ್ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 779 ಕ್ಕೆ ಉತ್ತರಗಳ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ನಿಮ್ಮ ನಂಬುಗೆಯ,

**(ಬಿ.ಎಂ. ಚಂದ್ರಶೇಖರ್)**
ಯೋಜನಾ ಸಮನ್ವಯಾಧಿಕಾರಿ(ಪ್ರ),
(ಬಿಎಂಐಸಿಪಿ),
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 779
ಸದಸ್ಯರ ಹೆಸರು : ಶ್ರೀ ಗೂಳಿಹಟ್ಟಿ ಡಿ ಶೇಖರ್ (ಹೊಸದುರ್ಗ)
ಉತ್ತರಿಸುವ ದಿನಾಂಕ : 13-2-2019
ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ನೈಸ್ ರಸ್ತೆಯ 30 ವರ್ಷಗಳ ಗುತ್ತಿಗೆ ಅವಧಿ ಯಾವಾಗ ಮುಗಿಯುತ್ತದೆ. | ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಯ ಸಂಬಂಧ ಮೆ: ನಂದಿ ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಎಂಟರ್‌ಪ್ರೈಸೆಸ್ ಲಿಮಿಟೆಡ್ ನೊಂದಿಗೆ ಸರ್ಕಾರವು ಮಾಡಿಕೊಂಡ ದಿನಾಂಕ 3-4-1997ರ ಕ್ರಿಯಾ ಒಪ್ಪಂದದ ಅನುಚ್ಛೇಧ 3.3.1 ರಂತೆ ಪ್ರತಿಯೊಂದು ಭಾಗದ ರಸ್ತೆಯು ಪೂರ್ಣಗೊಂಡಿದೆ ಎಂದು ಸಲ್ಲಿಸಲಾದ ಪೂರ್ಣಗೊಂಡ ಪ್ರಮಾಣ ಪತ್ರದಲ್ಲಿ (Toll Completion Notice) ನಮೂದಿಸಲಾದ ದಿನಾಂಕದಿಂದ 30 ವರ್ಷಗಳ ವರೆಗೆ ಗುತ್ತಿಗೆ ಅವಧಿ ಇರುತ್ತದೆ.<br><br>ಪ್ರಸ್ತುತ ಮೆ: ನೈಸ್ ಸಂಸ್ಥೆಯು ಸೆಕ್ಷನ್-ಎ ಭಾಗದ 41 ಕಿಮೀ ಉದ್ದದ ಪೆರಿಫೆರಲ್ ರಸ್ತೆ ಹಾಗೂ 9 ಕಿಮೀ ಉದ್ದದ ಲಿಂಕ್ ರಸ್ತೆಗಳಲ್ಲಿ ಅನುಕ್ರಮವಾಗಿ ದಿನಾಂಕ 18-12-2008 ಹಾಗೂ 29-5-2010 ರಿಂದ ಟೋಲ್ ಶುಲ್ಕ ವಸೂಲು ಮಾಡುತ್ತಿದ್ದು, ಈ ಭಾಗದ ರಸ್ತೆಯ ಗುತ್ತಿಗೆ ಅವಧಿಯು ಅನುಕ್ರಮವಾಗಿ ದಿನಾಂಕ 17-12-2038 ಮತ್ತು 28-5-2040 ಗಳಂದು ಕೊನೆಗೊಳ್ಳುತ್ತದೆ. |
| (ಆ) | ಪೆರಿಫೆರಲ್ ರಸ್ತೆಯಲ್ಲಿ ತುಮಕೂರು ರಸ್ತೆಯಿಂದ ಹೊಸೂರು ರಸ್ತೆಗೆ ಅಕ್ರಮವಾಗಿ ಟೋಲ್ ಸಂಗ್ರಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| (ಇ) | ಇದರ ತಡೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ನೈಸ್ ಸಂಸ್ಥೆಯೊಂದಿಗೆ ದಿನಾಂಕ 3-4-1997 ರಂದು ಮಾಡಿಕೊಂಡಿರುವ ಕ್ರಿಯಾ ಒಪ್ಪಂದದಂತೆ, ಎಲ್ಲಾ ಟೋಲ್ ರಸ್ತೆಗಳನ್ನು ಸಿಮೆಂಟ್ ಕಾಂಕ್ರೀಟ್ ರಸ್ತೆಯಾಗಿ ನಿರ್ಮಿಸಬೇಕಾಗಿರುತ್ತದೆ. ಮೂಲತಃ ನಿರ್ಮಿಸಲಾದ ಎಲ್ಲಾ ರಸ್ತೆಗಳನ್ನು ಡಾಂಬರು ರಸ್ತೆಯಾಗಿ ನಿರ್ಮಿಸಿದ್ದು, ಅದರಲ್ಲಿ ಕೆಲ ಭಾಗದ ಡಾಂಬರು ರಸ್ತೆಗಳ ಮೇಲೆ ಸಿಮೆಂಟ್ ವೈಟ್ ಟಾಪಿಂಗ್ ಮಾಡಲಾಗಿದೆ.<br>ಯೋಜನಾ ಸಂಸ್ಥೆಯು ಕ್ರಿಯಾ ಒಪ್ಪಂದದಂತೆ ಸೀಮೆಂಟ್ ಕಾಂಕ್ರೀಟ್ ರಸ್ತೆ ನಿರ್ಮಿಸದೇ ಇದ್ದುದರಿಂದ, ದಿನಾಂಕ 5-2-2016 ರಂದು, ಕ್ರಿಯಾ ಒಪ್ಪಂದದ ಆರ್ಟಿಕಲ್ 16.2 ರನ್ವಯ ಡಿಫಾಲ್ಟ್ ನೋಟೀಸು ನೀಡಿ 180 ದಿನಗಳೊಳಗೆ ಸರಿಪಡಿಸುವಂತೆ ಸೂಚಿಸಲಾಗಿತ್ತು. ಆದರೆ, ಯೋಜನಾ ಸಂಸ್ಥೆಯು ಸದರಿ ಡಿಫಾಲ್ಟ್ ನೋಟೀಸ್ ಅನ್ನು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂ. 12109-10:2016 ರಲ್ಲಿ ಪ್ರಶ್ನಿಸಿದ್ದು, ಘನ ನ್ಯಾಯಾಲಯವು ಸದರಿ ಡಿಫಾಲ್ಟ್ ನೋಟೀಸಿಗೆ ತಡೆಯಾಜ್ಞೆ ನೀಡಿರುತ್ತದೆ. ಪ್ರಕರಣವು ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ. |

| (ಈ) | ಮೂಲ ಒಪ್ಪಂದದ ಪ್ರಕಾರ ರಸ್ತೆಯ 2 ಬದಿಗಳಲ್ಲಿ ಇನ್ನು ಎಷ್ಟು ಕಿ.ಮೀ: ಕಾಂಕ್ರೀಟ್ ರಸ್ತೆ ಮಾಡಬೇಕಾಗಿರುತ್ತದೆ. | ಮೂಲ ಒಪ್ಪಂದದ ಪ್ರಕಾರ ಸಂಸ್ಥೆಯು ಇದುವರೆವಿಗೂ ಯಾವುದೇ ಭಾಗದ ರಸ್ತೆಯನ್ನು ಕಾಂಕ್ರೀಟ್ ರಸ್ತೆಯಾಗಿ ನಿರ್ಮಾಣ ಮಾಡದೇ ಇರುವುದರಿಂದ, ನಿರ್ಮಾಣ ಮಾಡಲಾದ ಎಲ್ಲಾ ಟೋಲ್ ರಸ್ತೆಗಳನ್ನು ಕಾಂಕ್ರೀಟ್ ರಸ್ತೆಯಾಗಿ ಪರಿವರ್ತಿಸಬೇಕಾಗಿರುತ್ತದೆ. |
|---|---|---|
| (ಉ) | ನೈಸ್ ಅಕ್ರಮಗಳ ಬಗ್ಗೆ ಸರ್ಕಾರದ ನಿಲುವೇನು (ವಿವರ ನೀಡುವುದು) | ಸರ್ಕಾರವು ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಯಲ್ಲಿ ನಡೆಸಿದ ಎನ್ನಲಾದ ಅಕ್ರಮಗಳ ಬಗ್ಗೆ ವಿಚಾರಣೆ ನಡೆಸಲು, ಆಗಿನ ಕಾನೂನು ಸಚಿವರ ಅಧ್ಯಕ್ಷತೆಯಲ್ಲಿನ ಕರ್ನಾಟಕ ವಿಧಾನ ಸಭೆಯ ಸದನ ಸಮಿತಿಯನ್ನು ರಚನೆ ಮಾಡಿತ್ತು. ಸದರಿ ಸದನ ಸಮಿತಿಯು ವಿಚಾರಣೆ ನಡೆಸಿ, ಡಿಸೆಂಬರ್ 2016 ರಲ್ಲಿ ವರದಿ ಸಲ್ಲಿಸಿದ್ದು, ಸದರಿ ವರದಿಯನ್ನು ಡಿಸೆಂಬರ್ 2016ರ ಚಳಿಗಾಲದ ಅಧಿವೇಶನದಲ್ಲೇ ವಿಧಾನ ಸಭೆಯಲ್ಲಿ ಮಂಡಿಸಲಾಗಿರುತ್ತದೆ.<br>ಸದನ ಸಮಿತಿಯು ಮಾಡಿರುವ ಶಿಫಾರಸ್ಸುಗಳಲ್ಲಿ ಕಾನೂನಾತ್ಮಕ ಅಂಶಗಳು ಒಳಗೊಂಡಿದ್ದು, ಈ ಯೋಜನೆ ಸಂಬಂಧ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಮೆ: ನೈಸ್ ಸಂಸ್ಥೆ ದಾಖಲಿಸಿರುವ ನಿಂದನಾ ಅರ್ಜಿ ಹಾಗೂ ಇತರೆ ಪ್ರಕರಣಗಳು ಬಾಕಿ ಇದ್ದು, ಅವುಗಳ ಹಿನ್ನೆಲೆಯಲ್ಲಿ ತೆಗೆದುಕೊಳ್ಳಬಹುದಾದ ಕ್ರಮದ ಬಗ್ಗೆ ಮಾನ್ಯ ಅಡ್ವೊಕೇಟ್ ಜನರಲ್ ರವರೊಂದಿಗೆ ಸಮಾಲೋಚಿಸುವ ಮೂಲಕ ಸರ್ಕಾರವು ಪರಿಶೀಲಿಸುತ್ತಿದೆ. |

ಸಂಖ್ಯೆ: ಲೋಇ 3 ಸಿಆರ್‌ಎಂ 2019

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ: ಲೋಇ 179 ಸೇಎಸು 2017

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 12-02-2019.

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ಬೆಂಗಳೂರು.

ಮಾನ್ಯರೇ,

ವಿಷಯ: ಶ್ರೀ ಅಂಗಾರ.ಎಸ್ (ಸುಳ್ಯ), ಮಾನ್ಯ ವಿಧಾನಸಭಾ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 455 ಕ್ಕೆ ಉತ್ತರವನ್ನು ಸಲ್ಲಿಸುವ ಬಗ್ಗೆ.

* * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಅಂಗಾರ.ಎಸ್ (ಸುಳ್ಯ), ಮಾನ್ಯ ವಿಧಾನಸಭಾ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 455ರ ಉತ್ತರದ 160 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಕಳುಹಿಸಿಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

12/02/19
(ಎಂ.ಜಿ.ವೆಂಕಟೇಶಯ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು-ಎ)

**ಕರ್ನಾಟಕ ವಿಧಾನಸಭೆ**
**15ನೇ ವಿಧಾನಸಭೆ**
**3ನೇ ಅಧಿವೇಶನ**

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 455 |
|---|---|---|
| ಸದಸ್ಯರ ಹೆಸರು | : | ಶ್ರೀ.ಅಂಗಾರ.ಎಸ್ |
| ಉತ್ತರಿಸುವ ದಿನಾಂಕಃ | : | 13.02.2019 |
| ಉತ್ತರಿಸುವ ಸಚಿವರು | : | ಮಾನ್ಯ ಲೋಕೋಪಯೋಗಿ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ) ಸುಳ್ಯ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಹೊಸದಾಗಿ ರಚನೆಗೊಂಡ ಕಡಬ ತಾಲ್ಲೂಕಿಗೆ ಲೋಕೋಪಯೋಗಿ ಉಪವಿಭಾಗ ಮಂಜೂರು ಮಾಡುವ ಉದ್ದೇಶ ಸರ್ಕಾರಕ್ಕಿದೆಯೇ; | ಇದೆ |
| ಆ) ಇದ್ದಲ್ಲಿ ಯಾವಾಗ ಮಂಜೂರು ಮಾಡಲಾಗುವುದು ? | ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಲೋಕೋಪಯೋಗಿ ಉಪವಿಭಾಗ, ಕಡಬ ಕಚೇರಿಯನ್ನು ಹೊಸದಾಗಿ ಸೃಜಿಸುವ ಬಗ್ಗೆ ಅವಶ್ಯವಿರುವ ಸಿಬ್ಬಂದಿ ಸೃಜನೆ, ಕಟ್ಟಡ ಹಾಗೂ ಅನುದಾನ ಬಿಡುಗಡೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ ಈ ಬಗ್ಗೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರಿಗೆ ಸೂಕ್ತ ಪ್ರಸ್ತಾವನೆ ಸಲ್ಲಿಸುವಂತೆ ಕೋರಲಾಗಿದ್ದು, ಪ್ರಸ್ತಾವನೆ ಸ್ವೀಕೃತವಾದ ನಂತರ ಹೊಸದಾಗಿ ಲೋಕೋಪಯೋಗಿ ಉಪವಿಭಾಗವನ್ನು ಪ್ರಾರಂಭಿಸುವ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಮಂಜೂರು ಮಾಡಲು ಕ್ರಮವಹಿಸಲಾಗುವುದು. |

ಸಂಖ್ಯೆ: ಲೋಇ 46 ಸೇಸಎ 2019

(ಹೆಚ್.ಡಿ.ರೇವಣ್ಣ)
ಲೋಕೋಪಯೋಗಿ ಸಚಿವರು

ಕರ್ನಾಟಕ ಸರ್ಕಾರ

ಲೋಇ:50:ಐಎಫ್‌ಎ:2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:12-02-2019

ಇವರಿಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ಸುವರ್ಣ ಸೌಧ
ಬೆಳಗಾವಿ

ಮಾನ್ಯರೆ,

**ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ರವಿ ಸಿ.ಟಿ (ಚಿಕ್ಕಮಗಳೂರು) ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:451 ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.**

** ** **

ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ರವಿ ಸಿ.ಟಿ (ಚಿಕ್ಕಮಗಳೂರು) ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:451 ಕ್ಕೆ ಸಿದ್ದಪಡಿಸಿರುವ ಉತ್ತರವನ್ನು 150 ಪ್ರತಿಗಳಲ್ಲಿ ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ವಿಶ್ವಾಸಿ,

(ಸಿ.ವಿ ಶಿವಪ್ಪ) 12.2.19
ಆಂತರಿಕ ಆರ್ಥಿಕ ಸಲಹೆಗಾರರು (ಪ್ರ)
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ

ಕರ್ನಾಟಕ ವಿಧಾನಸಭೆ

15ನೇ ವಿಧಾನಸಭೆ

3ನೇ ಅಧಿವೇಶನ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 451

ಸದಸ್ಯರ ಹೆಸರು : ಶ್ರೀ ರವಿ ಸಿ.ಟಿ (ಚಿಕ್ಕಮಗಳೂರು)

ಉತ್ತರಿಸುವ ದಿನಾಂಕ : 13-02-2019

ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ವಿಧಾನ ಸಭಾ ಕ್ಷೇತ್ರದ ರಸ್ತೆ ದುರಸ್ತಿ ಮತ್ತು ಅಭಿವೃದ್ಧಿಗಾಗಿ ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆ ಲೆಕ್ಕಶೀರ್ಷಿಕೆ 3054 ಅಡಿಯಲ್ಲಿ ಮಂಜೂರು ಮಾಡಿರುವ ಅನುದಾನವೆಷ್ಟು; | 2015-16, 2016-17 ಹಾಗೂ 2017-18ನೇ ಸಾಲಿನಲ್ಲಿ ಚಿಕ್ಕಮಗಳೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಲೆಕ್ಕಶೀರ್ಷಿಕೆ: 3054-ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆಯಡಿ ಒದಗಿಸಲಾದ ಅನುದಾನದ ವಿವರ ಕೆಳಕಂಡಂತಿದೆ: (ರೂ. ಲಕ್ಷಗಳಲ್ಲಿ) |

| ಕ್ರ. ಸಂ | ವರ್ಷ | ಅನುದಾನ |
|---|---|---|
| 1 | 2015-16 | 201.46 |
| 2 | 2016-17 | 84.64 |
| 3 | 2017-18 | 243.00 |
| | ಒಟ್ಟು | **529.10** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಈ ಅನುದಾನದಲ್ಲಿ ನಿರ್ವಹಿಸಿರುವ ಕಾಮಗಾರಿಗಳು ಯಾವುವು; ಅನುಷ್ಠಾನಗೊಳಿಸಲು ಬಾಕಿ ಇರುವ ಕಾಮಗಾರಿಗಳು ಯಾವುವು; ಬಾಕಿ ಇರಲು ಕಾರಣಗಳೇನು; (ವಿವರ ನೀಡುವುದು) | 2015-16, 2016-17 ಹಾಗೂ 2017-18ನೇ ಸಾಲಿನಲ್ಲಿ ಚಿಕ್ಕಮಗಳೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಲೆಕ್ಕಶೀರ್ಷಿಕೆ: 3054-ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆಯಡಿ ಕೈಗೆತ್ತಿಕೊಂಡ ಕಾಮಗಾರಿಗಳ ವಿವರಗಳನ್ನು **ಅನುಬಂಧ** ದಲ್ಲಿ ಒದಗಿಸಿದೆ. ಸದರಿ ಯೋಜನೆಯಡಿ ಅನುಮೋದನೆಯಾಗಿದ್ದ ಕಾಮಗಾರಿಗಳ ಪೈಕಿ 02 ಕಾಮಗಾರಿಗಳ ಸರಪಳಿಗಳು ಇತರೆ ಯೋಜನೆಗಳಡಿ ಸೇರ್ಪಡೆಯಾಗಿದ್ದರಿಂದ ಕೈಬಿಡಲಾಗಿದ್ದು, ಉಳಿದ ಎಲ್ಲಾ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ. |
| ಇ) | ಈ ಯೋಜನೆಯಡಿ ಮಂಜೂರಾತಿ ನೀಡಿ ಹಣ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಯಾವ ಕಾಮಗಾರಿಗಳಿಗೆ ಹಣ ಬಿಡುಗಡೆಯಾಗಿರುವುದಿಲ್ಲ; ಹಾಗೂ ಯಾವಾಗ ಅನುದಾನ ಬಿಡುಗಡೆ ಮಾಡಲಾಗುವುದು? (ವಿವರ ಒದಗಿಸುವುದು) | ಈ ಯೋಜನೆಯಡಿ ಅನುಷ್ಠಾನಗೊಳಿಸಿರುವ ಕಾಮಗಾರಿಗಳ ಪ್ರಗತಿಯನುಸಾರ ಬಾಕಿ ಬಿಲ್ಲುಗಳ ಪಾವತಿಗೆ ಈಗಾಗಲೇ ಹಣ ಬಿಡುಗಡೆ ಮಾಡಲಾಗಿರುತ್ತದೆ. |

ಲೋಇ/50/ಐಎಫ್ಎ/2019

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

## ಅನುಬಂಧ (ಪ್ರಶ್ನೆ ಸಂಖ್ಯೆ: 451)

**2015–16, 2016–17 ಹಾಗೂ 2017–18ನೇ ಸಾಲಿನಲ್ಲಿ ಚಿಕ್ಕಮಗಳೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಲೆಕ್ಕಶೀರ್ಷಿಕೆ: 3054–ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆಯಡಿ ಕೈಗೆತ್ತಿಕೊಂಡ ಕಾಮಗಾರಿಗಳ ವಿವರ**

(ರೂ. ಲಕ್ಷಗಳಲ್ಲಿ)

| ಕ್ರ ಸಂ | ತಾಲ್ಲೂಕು | ವಿಧಾನ ಸಭಾ ಕ್ಷೇತ್ರ | ಕಾಮಗಾರಿಯ ಹೆಸರು ಮತ್ತು ಇಂಡೆಂಟ್ ಸಂಖ್ಯೆ | ಅಂದಾಜು ಮೊತ್ತ | ಟೆಂಡರ್ ಮೊತ್ತ | ವೆಚ್ಚ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 8 | 9 |
| | | | **2015–16 ನೇಸಾಲಿನ ಹೊಸ ಕಾಮಗಾರಿಗಳು** | | | | |
| 1 | ಚಿಕ್ಕಮಗಳೂರು | ಚಿಕ್ಕಮಗಳೂರು | ಬಿ.ಟಿ. ರಸ್ತೆಯಿಂದ ಮಲ್ಲೇದೇವರಹಳ್ಳಿ–ಹರಿಹರದಹಳ್ಳಿ–ಕಳಸಾಪುರ ಸೇರುವ ರಸ್ತೆ 10.00 ರಿಂದ 12.10 ಹಾಗೂ 14.20 ರಿಂದ 16.30ರವರೆಗೆ ಅಭಿವೃದ್ಧಿ. 49654 | 107.78 | 100.02 | 99.82 | ಕಾಮಗಾರಿ ಮುಗಿದಿದೆ |
| | | | | **107.78** | **100.02** | **99.82** | |
| **ಪ್ಯಾಕೇಜ್–1** | | | | | | | |
| 1 | ಚಿಕ್ಕಮಗಳೂರು | ಚಿಕ್ಕಮಗಳೂರು | ಎಲೆಕಲ್ಲು–ಹುಯಿಗೆರೆ ರಸ್ತೆ ಕಿಮಿ 0.00 ರಿಂದ 15.20ರವರೆಗೆ ರಸ್ತೆ ದುರಸ್ತಿ. | 2.00 | 3.99 | 3.99 | ಕಾಮಗಾರಿ ಮುಗಿದಿದೆ. |
| 2 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ॥ ಶಿರವಾಸೆ–ಸಂಗಮೇಶ್ವರ ಪೇಟೆ ರಸ್ತೆ ಕಿಮಿ 10.20 ರಿಂದ 11.20ರವರೆಗೆ ಅಭಿವೃದ್ಧಿ | 2.00 | | | |
| | | | | **4.00** | **3.99** | **3.99** | |
| **ಪ್ಯಾಕೇಜ್–2** | | | | | | | |
| 3 | ಚಿಕ್ಕಮಗಳೂರು | ಚಿಕ್ಕಮಗಳೂರು | ಲಕ್ಯಾ–ಕಳಸಾಪುರ ರಸ್ತೆ ಕಿಮಿ 12.00 ರಿಂದ 12.50ರವರೆಗೆ ರಸ್ತೆ ದುರಸ್ತಿ. | 2.00 | 3.99 | 3.99 | ಕಾಮಗಾರಿ ಮುಗಿದಿದೆ. |
| 4 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾಲ್ಲೂಕು ಸೀತಾಳಯ್ಯನಗಿರಿ–ಮುಳ್ಳಯ್ಯನಗಿರಿ–ಪಂಡರವಳ್ಳಿ ರಸ್ತೆ ಕಿಮಿ 10.00 ರಿಂದ 13.00ರವರೆಗೆ ರಸ್ತೆ ಅಭಿವೃದ್ಧಿ. | 2.00 | | | |
| | | | | **4.00** | **3.99** | **3.99** | |
| **ಪ್ಯಾಕೇಜ್–3** | | | | | | | |
| 5 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ॥ ಆಲದಗುಡ್ಡೆ–ಬಸ್ಕಲ್ ರಸ್ತೆ ಆಯ್ದ ಭಾಗಗಳಲ್ಲಿ ರಸ್ತೆ ವಿಶೇಷ ದುರಸ್ತಿ | 2.00 | 3.99 | 3.99 | ಕಾಮಗಾರಿ ಮುಗಿದಿದೆ. |
| 6 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ॥ ಸಿ.ಎನ್.ಆರ್.ಪುರ ರಸ್ತೆ ಕಿಮಿ 24.20 ರಿಂದ 28.20 ರವರೆಗೆ ರಸ್ತೆ ಅಭಿವೃದ್ಧಿ | 2.00 | | | |
| | | | | **4.00** | **3.99** | **3.99** | |
| 7 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ॥ ಜೋಳದಾಳ್–ತೋರಣಮಾವು ರಸ್ತೆ 7.00 ರಿಂದ 7.08 ಕಿಮಿ ರವರೆಗೆ ಕಾಂಕ್ರೀಟ್ ರಸ್ತೆ ನಿರ್ಮಾಣ. | 4.50 | 4.49 | 4.49 | ಕಾಮಗಾರಿ ಮುಗಿದಿದೆ. |

| ಕ್ರ ಸಂ | ತಾಲ್ಲೂಕು | ವಿಧಾನ ಸಭಾ ಕ್ಷೇತ್ರ | ಕಾಮಗಾರಿಯ ಹೆಸರು ಮತ್ತು ಇಂಡೆಂಟ್ ಸಂಖ್ಯೆ | ಅಂದಾಜು ಮೊತ್ತ | ಟೆಂಡರ್ ಮೊತ್ತ | ವೆಚ್ಚ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 8 | 9 |
| 8 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾಲ್ಲೂಕು ಬಸವನಹಳ್ಳಿ ಮುಖ್ಯರಸ್ತೆ ಅಭಿವೃದ್ಧಿ. | 10.18 | | 0.00 | ಈ ರಸ್ತೆಯು ಎಸ್.ಎಚ್.ಡಿ.ಪಿ ಫೇಸ್-3ರ ಅಡಿಯಲ್ಲಿ 11.80ಕೋಟಿ ರೂ.ಗಳಿಗೆ ರಸ್ತೆ ಅಭಿವೃದ್ಧಿಪಡಿಸಲು ಅನುಮೋದನೆಗೊಂಡಿದ್ದು ಸದರಿ ಅಂದಾಜುಪಟ್ಟಿಯಲ್ಲಿ ಈ ಭಾಗವು ಸೇರಿಕೊಂಡಿರುವುದರಿಂದ ಈ ಕಾಮಗಾರಿಯನ್ನು ಕೈಬಿಡಲಾಗಿದೆ. |
| 9 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ॥ ಮಾಗಡಿ-ಜಾವಗಲ್ ರಸ್ತೆ ಕಿಮಿ 7.00, ಹಾಗೂ 21.30ರಲ್ಲಿ ಮೋರಿ ನಿರ್ಮಾಣ | 5.00 | 4.83 | 4.83 | ಕಾಮಗಾರಿ ಮುಗಿದಿದೆ. |
| 10 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ॥ ರಾಂಪುರ-ಮಳಲೂರು-ಕೆ.ಆರ್.ಪೇಟೆ ರಸ್ತೆ ಕಿಮಿ 1.60 ಹಾಗೂ 1.80ರಲ್ಲಿ ಮೋರಿ ನಿರ್ಮಾಣ | 5.00 | 4.35 | 4.35 | ಕಾಮಗಾರಿ ಮುಗಿದಿದೆ. |
| 11 | ಚಿಕ್ಕಮಗಳೂರು | ಚಿಕ್ಕಮಗಳೂರು | ಬಾಬಾಬುಡನ್‌ಗಿರಿ ರಸ್ತೆ ಕಿಮಿ 11.80 ರಲ್ಲಿ ಮೋರಿ ನಿರ್ಮಾಣ | 5.00 | 4.60 | 4.60 | ಕಾಮಗಾರಿ ಮುಗಿದಿದೆ. |
| 12 | ಚಿಕ್ಕಮಗಳೂರು | ಚಿಕ್ಕಮಗಳೂರು | ಬಾಬಾಬುಡನ್‌ಗಿರಿ ರಸ್ತೆ ಕಿಮಿ 16.80 ರಲ್ಲಿ ಮೋರಿ ನಿರ್ಮಾಣ | 4.00 | 3.99 | 3.99 | ಕಾಮಗಾರಿ ಮುಗಿದಿದೆ. |
| 13 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ॥ ಮಾಗಡಿ-ಜಾವಗಲ್ ರಸ್ತೆ ಕಿಮಿ 7.15 ರಿಂದ 7.20 ರವರೆಗೆ ತಡೆಗೋಡೆ ನಿರ್ಮಾಣ | 5.00 | 4.91 | 4.87 | ಕಾಮಗಾರಿ ಮುಗಿದಿದೆ. |
| 14 | ಚಿಕ್ಕಮಗಳೂರು | ಚಿಕ್ಕಮಗಳೂರು | ಉಪ್ಪಳ್ಳಿ-ಹಿರೇಕೊಳಲೆ ರಸ್ತೆ 2.70 ರಿಂದ 3.00 ಕಿಮಿ ರವರೆಗೆ ರಸ್ತೆ ಅಭಿವೃದ್ಧಿ. | 10.00 | 9.7 | 9.69 | ಕಾಮಗಾರಿ ಮುಗಿದಿದೆ. |
| 15 | ಚಿಕ್ಕಮಗಳೂರು | ಚಿಕ್ಕಮಗಳೂರು | ನರಿಗನಹಳ್ಳಿ-ಕಬ್ಬಿನಹಳ್ಳಿ-ಜಕ್ಕನಹಳ್ಳಿ ರಸ್ತೆ ಕಿಮಿ 12.00 ರಿಂದ 12.20ರವರೆಗೆ ರಸ್ತೆ ಮರುಡಾಂಬರೀಕರಣ. | 10.00 | 10.07 | 10.07 | ಕಾಮಗಾರಿ ಮುಗಿದಿದೆ. |
| 16 | ಚಿಕ್ಕಮಗಳೂರು | ಚಿಕ್ಕಮಗಳೂರು | ಇನಾಂ ದತ್ತಾತ್ರೇಯ ಪೀಠ ರಸ್ತೆ ಕಿಮಿ 2.40ನೇ ಕಿ.ಮೀ.ನಲ್ಲಿ ಮೋರಿ ನಿರ್ಮಾಣ. | 5.00 | 5.01 | 5.01 | ಕಾಮಗಾರಿ ಮುಗಿದಿದೆ. |
| 17 | ಚಿಕ್ಕಮಗಳೂರು | ಚಿಕ್ಕಮಗಳೂರು | ಇನಾಂ ದತ್ತಾತ್ರೇಯ ಪೀಠ ರಸ್ತೆ ಕಿಮಿ2.60 ನೇ ಕಿ.ಮೀ.ನಲ್ಲಿ ಮೋರಿ ನಿರ್ಮಾಣ | 5.00 | 5.55 | 5.55 | ಕಾಮಗಾರಿ ಮುಗಿದಿದೆ. |
| 18 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ॥ ಜೋಳದಾಳ್-ತೋರಣಮಾವು ರಸ್ತೆ 9.00 ರಿಂದ 9.15 ಕಿಮೀವರೆಗೆ ರಸ್ತೆ ಅಭಿವೃದ್ಧಿ. | 8.00 | 7.45 | 7.45 | ಕಾಮಗಾರಿ ಮುಗಿದಿದೆ. |
| 19 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ॥ ಮಾಗಡಿ-ಜಾವಗಲ್ ರಸ್ತೆ ಕಿಮಿ 13.50 ರಿಂದ 13.60 ರವರೆಗೆ ರಸ್ತೆ ಅಭಿವೃದ್ಧಿ. | 5.00 | 4.99 | 4.99 | ಕಾಮಗಾರಿ ಮುಗಿದಿದೆ. |
| | | | | **201.46** | **181.93** | **181.68** | |

| ಕ್ರ ಸಂ | ತಾಲ್ಲೂಕು | ವಿಧಾನ ಸಭಾ ಕ್ಷೇತ್ರ | ಕಾಮಗಾರಿಯ ಹೆಸರು ಮತ್ತು ಇಂಡೆಂಟ್ ಸಂಖ್ಯೆ | ಅಂದಾಜು ಮೊತ್ತ | ಟೆಂಡರ್ ಮೊತ್ತ | ವೆಚ್ಚ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 8 | 9 |
| **2016–17 ನೇಸಾಲಿನ ಹೊಸ ಕಾಮಗಾರಿಗಳು** | | | | | | | |
| 1 | ಚಿಕ್ಕಮ ಗಳೂರು | ಚಿಕ್ಕಮ ಗಳೂರು | ಸಿ.ಎನ್.ಆರ್. ಪುರ ಕಿಮಿ 24.50 ರಿಂದ 26.50 ರವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ. 38321 | 35.78 | 32.11 | 32.10 | ಕಾಮಗರಿ ಮುಗಿದಿದೆ |
| 2 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾಲ್ಲೂಕು ವತ್ತಾ ಪೀಠ ರಸ್ತೆ 0.00 ರಿಂದ 2.00 ರವರೆಗೆ ರಸ್ತೆ ನಿರ್ವಹಣೆ | 10.00 | 8.81 | 9.25 | ಕಾಮಗಾರಿ ಮುಗಿದಿದೆ. |
| 3 | ಚಿಕ್ಕಮಗಳೂರು | ಚಿಕ್ಕಮಗಳೂರು | ಬಿ.ಟಿ.ರಸ್ತೆಯಿಂದ ಮಲ್ಲೇದೇವರಹಳ್ಳಿ ಹರಿಹರದಹಳ್ಳಿ ರಸ್ತೆ ಕಿ.ಮೀ 3.50 ರಿಂದ 4.00 ರವರೆಗೆ ರಸ್ತೆ ಮರು ಡಾಂಬರೀಕರಣ 26823 | 10.00 | 7.09 | 7.09 | ಕಾಮಗಾರಿ ಮುಗಿದಿದೆ. |
| 4 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾಲ್ಲೂಕು ಲಕ್ಯಾ ಕಳಸಾಪುರ ರಸ್ತೆ 3.10 ಕಿಮಿ ರಿಂದ 4.00 ರವರೆಗೆ ರಸ್ತೆ ಅಗಲೀಕರಣ 40143 | 18.86 | 18.41 | 18.41 | ಕಾಮಗಾರಿ ಮುಗಿದಿದೆ. |
| 5 | ಚಿಕ್ಕಮಗಳೂರು | ಚಿಕ್ಕಮ ಗಳೂರು | ಚಿಕ್ಕಮಗಳೂರು ತಾ: ಉಪ್ಪಳ್ಳಿ–ಹಿರೇಕೊಳಲೆ ರಸ್ತೆ ಕಿ.ಮೀ. 0.80 ರಿಂದ 1.30 ರವರೆಗೆ ರಸ್ತೆ ಮರು ಡಾಂಬರೀಕರಣ 44836 | 10.00 | 8.90 | 8.72 | ಕಾಮಗಾರಿ ಮುಗಿದಿದೆ. |
| | | | | **84.64** | **75.32** | **75.57** | |
| **2017–18ನೇ ಸಾಲಿನ ಹೊಸ ಕಾಮಗಾರಿಗಳು** | | | | | | | |
| 1 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ: ಮಾಗಡಿ ಜಾವಗಲ್ ರಸ್ತೆಯಿಂದ ಮಾಚೇನಹಳ್ಳಿ ರಾಮಕೃಷ್ಣಾಪುರ ರಸ್ತೆ ಕಿ.ಮೀ 0.00 ರಿಂದ 3.00ಕಿ.ಮೀ ವರೆಗೆ ರಸ್ತೆ ನವೀಕರಣ. | 30.00 | 34.63 | 34.60 | ಕಾಮಗಾರಿ ಮುಗಿದಿದೆ. |
| 2 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ: ಮಾಗಡಿ ಜಾವಗಲ್ ರಸ್ತೆಯಿಂದ ಎಸ್.ಬಿದರೆ ರಸ್ತೆ ಕಿ.ಮೀ 0.00 ರಿಂದ 1.00ಕಿ.ಮೀ ವರೆಗೆ ರಸ್ತೆ ನವೀಕರಣ. | 10.00 | 9.78 | 9.37 | ಕಾಮಗಾರಿ ಮುಗಿದಿದೆ. |
| 3 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ: ಮಾಗಡಿ ಜಾವಗಲ್ ರಸ್ತೆಯಿಂದ ನರಸೀಪುರ ರಸ್ತೆ ಕಿ.ಮೀ 0.00 ರಿಂದ 1.00ಕಿ.ಮೀ ವರೆಗೆ ರಸ್ತೆ ನವೀಕರಣ. | 8.00 | 7.78 | 7.77 | ಕಾಮಗಾರಿ ಪೂರ್ಣಗೊಂಡಿದೆ |
| 4 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ: ಮಾಗಡಿ ಜಾವಗಲ್ ರಸ್ತೆಯಿಂದ ವಡ್ಡರಹಳ್ಳಿ ಸೇರುವ ರಸ್ತೆ ಕಿ.ಮೀ 0.00 ರಿಂದ 1.00ಕಿ.ಮೀ ವರೆಗೆ ರಸ್ತೆ ನವೀಕರಣ. | 8.00 | 7.61 | 7.60 | ಕಾಮಗಾರಿ ಪೂರ್ಣಗೊಂಡಿದೆ |
| 5 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ: ಮಾಗಡಿ ಜಾವಗಲ್ ರಸ್ತೆಯಿಂದ ಗೋವಿಂದಪುರ ಸೇರುವ ರಸ್ತೆ ಕಿ.ಮೀ 0.00 ರಿಂದ 1.00ಕಿ.ಮೀ ವರೆಗೆ ರಸ್ತೆ ನವೀಕರಣ. | 8.00 | 8.01 | 7.41 | ಕಾಮಗಾರಿ ಪೂರ್ಣಗೊಂಡಿದೆ |
| 6 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ: ಲಕ್ಯಾ ಕಳಸಾಪುರ ರಸ್ತೆ ಕಿ.ಮೀ 7.00 ರಿಂದ 8.50ಕಿ.ಮೀ ವರೆಗೆ ರಸ್ತೆ ನವೀಕರಣ. | 11.00 | 10.15 | 10.15 | ಕಾಮಗಾರಿ ಪೂರ್ಣಗೊಂಡಿದೆ |

| ಕ್ರ ಸಂ | ತಾಲ್ಲೂಕು | ವಿಧಾನ ಸಭಾ ಕ್ಷೇತ್ರ | ಕಾಮಗಾರಿಯ ಹೆಸರು ಮತ್ತು ಇಂಡೆಂಟ್ ಸಂಖ್ಯೆ | ಅಂದಾಜು ಮೊತ್ತ | ಟೆಂಡರ್ ಮೊತ್ತ | ವೆಚ್ಚ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 8 | 9 |
| 7 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ: ನರಗನಹಳ್ಳಿ ಕಬ್ಬಿನಹಳ್ಳಿ ರಸ್ತೆ ಕಿ.ಮೀ 5.50 ರಿಂದ 7.50ಕಿ.ಮೀ ವರೆಗೆ ರಸ್ತೆ ನವೀಕರಣ. | 15.00 | 14.23 | 14.12 | ಕಾಮಗಾರಿ ಪೂರ್ಣಗೊಂಡಿದೆ |
| 8 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ: ಸಿ.ಎಸ್.ಆರ್.ಪುರ ರಸ್ತೆ ಕಿ.ಮೀ 1.00 ರಿಂದ 1.88ಕಿ.ಮೀ ವರೆಗೆ ಮತ್ತು 3.60ಕಿ.ಮೀ ರಿಂದ 6.00ಕಿ.ಮೀ ವರೆಗೆ ರಸ್ತೆ ನವೀಕರಣ. | 50.00 | 49.08 | 49.08 | ಕಾಮಗಾರಿ ಪೂರ್ಣಗೊಂಡಿದೆ |
| 9 | ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು ತಾ: ಶಿರವಾಸೆ ಸಂಗಮೇಶ್ವರಪೇಟೆ ರಸ್ತೆ ಕಿ.ಮೀ 1.00 ರಿಂದ 2.00ಕಿ.ಮೀ ವರೆಗೆ ರಸ್ತೆ ನವೀಕರಣ. | 10.00 | 9.94 | 9.94 | ಕಾಮಗಾರಿ ಪೂರ್ಣಗೊಂಡಿದೆ |
| 10 | ಕಡೂರು | ಚಿಕ್ಕಮಗಳೂರು | ಕಡೂರು ತಾಲ್ಲೋಕು ಬಿ.ಎಸ್.ರಸ್ತೆಯಿಂದ ನಾಗೇನಹಳ್ಳಿ ಮುಖಾಂತರ ಎಸ್.ಜಿ.ರಸ್ತೆಗೆ ಸೇರುವ ರಸ್ತೆ ಕಿಮಿ 0.00 ರಿಂದ 5.00 ಕಿಮಿ ವರೆಗೆ ರಸ್ತೆ ನವೀಕರಣ 72737 | 50.00 | 47.28 | 46.08 | ಕಾಮಗಾರಿ ಮುಗಿದಿದೆ |
| 11 | ಕಡೂರು | ಚಿಕ್ಕಮಗಳೂರು | ಕಡೂರು ತಾಲ್ಲೋಕು ನಾಗರಾಳು ರಸ್ತೆ ಕಿಮಿ 0.00 ರಿಂದ 2.00 ಕಿಮೀವರೆಗೆ ರಸ್ತೆ ನವೀಕರಣ | 13.00 | 0.00 | 0.00 | ಕೈಬಿಡಲಾಗಿದೆ. |
| 12 | ಕಡೂರು | ಚಿಕ್ಕಮಗಳೂರು | ಕಡೂರು ತಾಲ್ಲೋಕು ಬಿ.ಎಸ್.ರಸ್ತೆಯಿಂದ ಡಿ.ಕಾರೇಹಳ್ಳಿ ರಸ್ತೆ ಕಿಮಿ 0.00 ರಿಂದ 2.00 ಕಿಮೀವರೆಗೆ ರಸ್ತೆ ನವೀಕರಣ 72756 | 10.00 | 10.05 | 10.06 | ಕಾಮಗಾರಿ ಪೂರ್ಣಗೊಂಡಿದೆ |
| 13 | ಕಡೂರು | ಚಿಕ್ಕಮಗಳೂರು | ಕಡೂರು ತಾಲ್ಲೋಕು ಬಿ.ಎಸ್.ರಸ್ತೆಯಿಂದ ಚಟ್ನಹಳ್ಳಿ ರಸ್ತೆ ಕಿಮಿ 0.00 ರಿಂದ 2.00 ಕಿಮೀವರೆಗೆ ರಸ್ತೆ ನವೀಕರಣ 72752 | 10.00 | 9.98 | 9.96 | ಕಾಮಗಾರಿ ಮುಗಿದಿದೆ |
| 14 | ಕಡೂರು | ಚಿಕ್ಕಮಗಳೂರು | ಕಡೂರು ತಾಲ್ಲೋಕು ಬಿ.ಎಸ್.ರಸ್ತೆಯಿಂದ ಚಿಕ್ಕಬಾಣೂರು( ಶಿವಪುರ) ಸೇರುವ ರಸ್ತೆ ಕಿಮಿ 0.00 ರಿಂದ 2.00 ಕಿಮೀವರೆಗೆ ರಸ್ತೆ ನವೀಕರಣ 72754 | 10.00 | 10.03 | 9.88 | ಕಾಮಗಾರಿ ಮುಗಿದಿದೆ |
| | | | | **243.00** | **228.55** | **226.02** | |
| | | | ಒಟ್ಟು | **529.10** | **485.80** | **483.27** | |

ಶ್ರೀ ರವಿ ಸಿ.ಟಿ (ಚಿಕ್ಕಮಗಳೂರು) ವಿಧಾನ ಸಭೆಯ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ:451 ಕ್ಕೆ ಉತ್ತರಗಳು

<table>
<tr><th>ಕ್ರ.ಸಂ.</th><th>ಪ್ರಶ್ನೆಗಳು</th><th colspan="4">ಉತ್ತರಗಳು</th></tr>
<tr><td rowspan="3">ಅ</td><td rowspan="3">ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ವಿಧಾನ ಸಭಾ ಕ್ಷೇತ್ರದ ರಸ್ತೆ ದುರಸ್ತಿ ಮತ್ತು ಅಭಿವೃದ್ಧಿಗಾಗಿ ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆ ಲೆಕ್ಕ ಶೀರ್ಷಿಕೆ 3054 ಅಡಿಯಲ್ಲಿ ಮಂಜೂರು ಮಾಡಿರುವ ಅನುದಾನವೆಷ್ಟು;</td><td colspan="4">ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ವಿಧಾನ ಸಭಾ ಕ್ಷೇತ್ರದ ರಸ್ತೆ ದುರಸ್ಥಿ ಮತ್ತು ಅಭಿವೃದ್ಧಿಗಾಗಿ ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆ ಲೆಕ್ಕ ಶೀರ್ಷಿಕೆ 3054 ಅಡಿಯಲ್ಲಿ ಮಂಜೂರು ಮಾಡಿರುವ ಅನುದಾನದ ವಿವರ ಈ ಕೆಳಕಂಡಂತಿದೆ.<br>(ರೂ ಲಕ್ಷಗಳಲ್ಲಿ)</td></tr>
<tr><td>ವರ್ಷ</td><td>2015-16</td><td>2016-17</td><td>2017-18</td></tr>
<tr><td>ಮೊತ್ತ</td><td>201.46</td><td>208.00</td><td>243.00</td></tr>
<tr><td>ಆ</td><td>ಈ ಅನುದಾನದಲ್ಲಿ ನಿರ್ವಹಿಸಿರುವ ಕಾಮಗಾರಿಗಳು ಯಾವುವು; ಅನುಷ್ಠಾನಗೊಳಿಸಲು ಬಾಕಿ ಇರುವ ಕಾಮಗಾರಿಗಳು ಯಾವುವು; ಬಾಕಿ ಇರಲು ಕಾರಣಗಳೇನು; (ವಿವರ ನೀಡುವುದು)</td><td colspan="4">ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ವಿಧಾನ ಸಭಾ ಕ್ಷೇತ್ರದಲ್ಲಿ ಕೈಗೊಂಡಿರುವ ಕಾಮಗಾರಿಗಳ ಪಟ್ಟಿಯನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. ಎರಡು ಕಾಮಗಾರಿಗಳನ್ನು ಕೈಬಿಡಲಾಗಿದ್ದು, ಉಳಿದ ಎಲ್ಲಾ ಕಾಮಗಾರಿಗಳು ಪೂರ್ಣಗೊಂಡಿರುತ್ತದೆ.</td></tr>
<tr><td>ಇ</td><td>ಈ ಯೋಜನೆಯಡಿ ಮಂಜೂರಾತಿ ನೀಡಿ ಹಣ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಯಾವ ಕಾಮಗಾರಿಗಳಿಗೆ ಹಣ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಯಾವ ಕಾಮಗಾರಿಗಳಿಗೆ ಹಣ ಬಿಡುಗಡೆಯಾಗಿರುವುದಿಲ್ಲ; ಹಾಗೂ ಯಾವಾಗ ಅನುದಾನ ಬಿಡುಗಡೆ ಮಾಡಲಾಗುವುದು? (ವಿವರ ಒದಗಿಸುವುದು)</td><td colspan="4">ಈ ಯೋಜನೆಯಡಿ ನಿಗಧಿತ ಅನುದಾನ ಸರಕಾರದಿಂದ ಬಿಡುಗಡೆಯಾಗಿದ್ದು, ಹಣ ಬಿಡುಗಡೆಯಾಗದ ಕಾಮಗಾರಿಗಳು ಯಾವುದು ಇರುವುದಿಲ್ಲ. ಕಾಮಗಾರಿಗಳ ಪ್ರಗತಿಯನುಸಾರ ಬಿಲ್ಲುಗಳ ಪಾವತಿಗಾಗಿ ಹೆಚ್ಚುವರಿಯಾಗಿ ಸಕಾರದಿಂದ ಈಗಾಗಲೇ ಹಣ ಬಿಡುಗಡೆಯಾಗಿರುತ್ತದೆ, ಬಿಲ್ಲುಗಳ ಸ್ವೀಕೃತವಾದ ಕೂಡಲೇ ಬಿಲ್ಲುಗಳ ಪಾವತಿ ಮಾಡಲಾಗುತ್ತದೆ.</td></tr>
</table>

ಮುಖ್ಯ ಇಂಜಿನಿಯರ್ ಪರವಾಗಿ,
ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ),
ಬೆಂಗಳೂರು

# ಕರ್ನಾಟಕ ಸರ್ಕಾರ

ಸಂಖ್ಯೆ: **ಸಿಐ 24 ಐಎಪಿ 2019**

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: **12.02.2019**

**ಇವರಿಂದ,**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅರವಿಂದ ಚಂದ್ರಕಾಂತ ಬೆಲ್ಲದ್ (ಹುಬ್ಬಳ್ಳಿ-ಧಾರವಾಡ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 855ಕ್ಕೆ ಉತ್ತರಿಸುವ ಬಗ್ಗೆ.

* * * *

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅರವಿಂದ ಚಂದ್ರಕಾಂತ ಬೆಲ್ಲದ್ (ಹುಬ್ಬಳ್ಳಿ-ಧಾರವಾಡ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 855ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

12/2/19

**(ಬಿ. ವೆಂಕಟೇಶಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 855
2. ಸದಸ್ಯರ ಹೆಸರು : ಶ್ರೀ ಅರವಿಂದ ಚಂದ್ರಕಾಂತ ಬೆಲ್ಲದ್ (ಹುಬ್ಬಳ್ಳಿ-ಧಾರವಾಡ ಪಶ್ಚಿಮ)
3. ಉತ್ತರಿಸುವ ದಿನಾಂಕ : 13.02.2019
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಇನ್ಫೋಸಿಸ್ ಕಂಪನಿಗೆ ಹುಬ್ಬಳ್ಳಿಯಲ್ಲಿ ಎಷ್ಟು ಜಮೀನು ಮಂಜೂರು ಮಾಡಲಾಗಿದೆ; ಈ ಜಮೀನನ್ನು ಕೊಡಬೇಕಾದರೆ ಕಂಪನಿಯವರು ಎಷ್ಟು ಪ್ರಮಾಣದ ಉದ್ಯೋಗ ಸೃಷ್ಟಿ ಮಾಡಲಾಗುತ್ತದೆಂದು ಭರವಸೆ ನೀಡಿರುತ್ತಾರೆ; ಸದ್ಯದಲ್ಲಿ ಸೃಷ್ಟಿಯಾಗಿರುವ ಉದ್ಯೋಗಗಳ ಸಂಖ್ಯೆ ಎಷ್ಟು; | ಹುಬ್ಬಳ್ಳಿಯಲ್ಲಿ ಇನ್ಫೋಸಿಸ್ ಕಂಪನಿಗೆ 43-02 ಎಕರೆ ಜಮೀನನ್ನು ಮಂಜೂರು ಮಾಡಲಾಗಿದೆ.<br>ಸರ್ಕಾರದ ದಿನಾಂಕ: 02.11.2012, ಆದೇಶ ಸಂಖ್ಯೆ: ಸಿಐ 357 ಎಸ್‌ಪಿಐ 2012ರನ್ವಯ ಕಂಪನಿಯು 1000 ಜನರಿಗೆ ಉದ್ಯೋಗವಕಾಶ ಕಲ್ಪಿಸಬೇಕಾಗಿರುತ್ತದೆ.<br>ಇನ್ಫೋಸಿಸ್ ಕಂಪನಿಯು ಇನ್ನೂ ನಿರ್ಮಾಣ ಹಂತದಲ್ಲಿರುತ್ತದೆ. |
| ಆ. | ಇನ್ಫೋಸಿಸ್ ಸಂಸ್ಥೆಗೆ ಹುಬ್ಬಳ್ಳಿಯಲ್ಲಿ ನೀಡಿದ ಭೂಮಿಯಲ್ಲಿ ಎಷ್ಟು ಶೇಕಡಾವಾರು ಜಾಗದಲ್ಲಿ ಕಟ್ಟಡ ನಿರ್ಮಿಸಲಾಗಿದೆ; ಉಳಿಕೆಯಾದ ಜಾಗವೆಷ್ಟು; | ಸದರಿ ಸಂಸ್ಥೆಯವರಿಗೆ ನೀಲಿ ನಕ್ಷೆಯ ಅನುಮೋದನೆಯನ್ವಯ ಶೇಕಡಾ 9.70ರಷ್ಟು ಪ್ರದೇಶದಲ್ಲಿ ಕಟ್ಟಡ, ರಸ್ತೆ, ಪಾರ್ಕ್ ಮತ್ತು ಪಾರ್ಕಿಂಗ್ ವ್ಯವಸ್ಥೆಗೆ ಭೂಮಿ ಉಪಯೋಗಿಸಿರುತ್ತಾರೆ.<br>ಉಳಿದಂತೆ ಶೇಕಡಾ 40.30 ವಿಸ್ತೀರ್ಣದಲ್ಲಿ 05 ಸಾಫ್ಟ್‌ವೇರ್ ಡೆವೆಲಪಮೆಂಟ್ ಬ್ಲಾಕ್, 02 ಫುಡ್ ಕೋರ್ಟ್, 01 ಕಾರ್ಮಿಕರ ಕೇರ್ ಸೆಂಟರ್‌ನ್ನು ಅಭಿವೃದ್ಧಿ ಯೋಜನೆ ರೂಪಿಸಿಕೊಂಡಿರುತ್ತಾರೆ. |
| ಇ. | ಉಳಿದ ಜಾಗದಲ್ಲಿ ಇನ್ಫೋಸಿಸ್ ಸಂಸ್ಥೆಯು ಉದ್ಯಮವನ್ನು ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಭೂಮಿಯನ್ನು ಇತರೆ ಉದ್ಯೋಗ ಸೃಷ್ಟಿಸುವ ಕಂಪನಿಗಳಿಗೆ / ಸಂಸ್ಥೆಗಳಿಗೆ ನೀಡುವ ಬಗ್ಗೆ ಸರ್ಕಾರದ ನಿಲುವೇನು (ವಿವರ ನೀಡುವುದು)? | ಸದರಿ ಸಂಸ್ಥೆಗೆ ದಿನಾಂಕ: 19.09.2013ರಂದು 10 ವರ್ಷಗಳ ಅವಧಿಗೆ ಗುತ್ತಿಗೆ ಕರಾರು ಮಾಡಿಕೊಡಲಾಗಿದೆ.<br>ವಿವಿಧ ಹಂತಗಳಲ್ಲಿ ಹಂಚಿಕೆಯಾದ ನಿವೇಶನವನ್ನು ಸಂಸ್ಥೆಯವರು ಸಂಪೂರ್ಣವಾಗಿ ಬಳಸಿಕೊಂಡು ಅನುಷ್ಠಾನಗೊಳಿಸಲು ಉದ್ದೇಶಿಸಿರುತ್ತಾರೆ. |

ಸಂಖ್ಯೆ: ಸಿಐ 24 ಐಎಪಿ 2019

(ಕೆ.ಜೆ. ಜಾರ್ಜ್) 12/2/19
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ:ಹೆಚ್‌ಡಿ: 75 :ಎಸ್ಎಸ್‌ಟಿ:2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ: 12/2/2019

163
415
13/02/19

**ಇವರಿಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
ವಿಧಾನಸೌಧ, ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ವಿಧಾನ ಪರಿಷತ್/ಸಭೆ, ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಪರಿಷತ್/ಸಭೆ ಸದಸ್ಯರಾದ ಶ್ರೀ ಸತೀಶ್ ರೆಡ್ಡಿ ಎಂ. ಬೊಮ್ಮನಹಳ್ಳಿ ರವರ ಚುಕ್ಕೆ ಗುರುತಿನ/ ಗುರುತಿಲ್ಲದ ಪ್ರಶ್ನೆ ಸಂ: 647 ಗೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಸಲ್ಲಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತು ರವರ ಪತ್ರ ಸಂ:ಪ್ರಶಾಖೆ/15ನೇವಿಸ/3ಅ/ಪ್ರಸಂ: 647/2019

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದನ್ವಯ ಕರ್ನಾಟಕ ವಿಧಾನ ಪರಿಷತ್/ಸಭೆ ಸದಸ್ಯರಾದ ಶ್ರೀ ಸತೀಶ್ ರೆಡ್ಡಿ ಎಂ. ಬೊಮ್ಮನಹಳ್ಳಿ ರವರ ಚುಕ್ಕೆ ಗುರುತಿನ/ ಗುರುತಿಲ್ಲದ ಪ್ರಶ್ನೆ ಸಂ: 647 ಗೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸುತ್ತಾ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ನಂಬುಗೆಯ,

(ಕೆ.ಪದ್ಮನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)
20333254, e-mail:uslo-home@karnataka.gov.in

**ಪ್ರತಿ:**

1.ಮಾನ್ಯ ಉಪ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಯವರಿಗೆ.
2.ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
3.ಸರ್ಕಾರದ ಕಾರ್ಯದರ್ಶಿ(ಪಿಸಿಎಎಸ್) ರವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
4.ಸರ್ಕಾರದ ಉಪ ಕಾರ್ಯದರ್ಶಿ(ಕಾನೂನು & ಸುವ್ಯವಸ್ಥೆ) ರವರ ಆಪ್ತ ಸಹಾಯಕರು, ಒಳಾಡಳಿತ ಇಲಾಖೆ.
5.ಸರ್ಕಾರದ ಅಧೀನ ಕಾರ್ಯದರ್ಶಿ(ಸಮನ್ವಯ), ಒಳಾಡಳಿತ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 647
ಸದಸ್ಯರ ಹೆಸರು : ಶ್ರೀ ಸತೀಶ್ ರೆಡ್ಡಿ ಎಂ. (ಬೊಮ್ಮನಹಳ್ಳಿ)
ಉತ್ತರಿಸುವ ದಿನಾಂಕ : 13/02/2019.
ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿನ ಸಿಲ್ಕ್ ಬೋರ್ಡ್‌ನಿಂದ ಮಾರತ್ತಳ್ಳಿಗೆ ಹೋಗುವ ರಸ್ತೆಯಲ್ಲಿ ವಿಪರೀತ ವಾಹನ ದಟ್ಟಣೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಸಾರ್ವಜನಿಕರಿಗೆ ಉಂಟಾಗುತ್ತಿರುವ ತೊಂದರೆಯನ್ನು ಪರಿಹರಿಸಲು ಹಾಗೂ ವಾಹನ ದಟ್ಟಣೆ ನಿಯಂತ್ರಿಸಲು ಪೊಲೀಸ್ ಇಲಾಖೆ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು) | ಕೇಂದ್ರ ರೇಷ್ಮೇಮಂಡಳಿ ವೃತ್ತದಿಂದ ಮಾರತ್ ಹಳ್ಳಿ ಜಂಕ್ಷನ್ ವರೆಗೆ ಹೊರವರ್ತುಲ ರಸ್ತೆಯ ಇಕ್ಕೆಲಗಳಲ್ಲೂ ಸಹ ಐ.ಟಿ/ಬಿ.ಟಿ ಕಂಪೆನಿಗಳು ಪ್ರತಿಷ್ಠಿತ ಪಂಚತಾರ ಹೋಟೆಲ್‌ಗಳು ಶಾಲಾಕಾಲೇಜುಗಳು ವ್ಯಾಪಿಸಿದ್ದು, ಕಂಪೆನಿಗಳಿಗೆ ಕಾರ್ಮಿಕರುಗಳು ದಿನಂಪ್ರತಿ ಹಗಲು ಇರುಳೆನ್ನದೆ ಬಂದು ಹೋಗುತ್ತಿರುವುದರಿಂದ ಹಾಗೂ ಹೊರವರ್ತುಲ ರಸ್ತೆಯು ರಾಷ್ಟ್ರೀಯ ಹೆದ್ದಾರಿ ಹೊಸೂರು ಮುಖ್ಯರಸ್ತೆ ಮತ್ತು ರಾಜ್ಯ ಹೆದ್ದಾರಿ ಸರ್ಜಾಪುರ ಮುಖ್ಯರಸ್ತೆಗೆ ಜೋಡಣೆ ರಸ್ತೆಯಾಗಿರುವುದರಿಂದ ರಾಜ್ಯದಿಂದ ಹೊರಕ್ಕೆ ಮತ್ತು ನಗರದ ವಿವಿಧ ಭಾಗಗಳಿಗೆ ಬಂದು ಹೋಗುತ್ತಿರುವುದರಿಂದ ಸಂಚಾರ ದಟ್ಟಣೆಗೆ ಕಾರಣವಾಗಿರುತ್ತದೆ.<br>ಸಂಚಾರ ದಟ್ಟಣೆಯನ್ನು ನಿಯಂತ್ರಣಗೊಳಿಸಲು ಈ ಕೆಳಕಂಡ ಮಾರ್ಗೋಪಾಯಗಳನ್ನು ಅನುಸರಿಸಲಾಗಿರುತ್ತದೆ.<br>1. ಕೇಂದ್ರ ರೇಷ್ಮೇ ಮಂಡಳಿ ವೃತ್ತದಲ್ಲಿ ಹೆಚ್.ಎಸ್.ಆರ್ ಲೇಔಟ್ ಕಡೆಗಿನ ನಗರ ಸಾರಿಗೆ ಬಸ್ಸು ನಿಲ್ದಾಣದಿಂದ ಸಂಚಾರ ದಟ್ಟಣೆಗೆ ಕಾರಣವಾಗುತ್ತಿದ್ದು, ಸದರಿ ನಿಲ್ದಾಣವನ್ನು ಸರ್ವಿಸ್ ರಸ್ತೆಯನ್ನು ಸೇರಿಸಿಕೊಂಡು ಬಸ್-ಬೇಯನ್ನು ನಿರ್ಮಿಸಿ ಸಂಚಾರ ದಟ್ಟಣೆಯನ್ನು ನಿಯಂತ್ರಣಗೊಳಿಸಲಾಗಿದೆ.<br>2. ಕೇಂದ್ರ ರೇಷ್ಮೇ ಮಂಡಳಿ ವೃತ್ತದಿಂದ ಮಾರತ್‌ಹಳ್ಳಿ ಕಾರ್ತಿಕ್‌ನಗರ ಜಂಕ್ಷನ್‌ವರೆಗೂ ಮುಖ್ಯರಸ್ತೆಯಲ್ಲಿ ಅನಧಿಕೃತವಾಗಿ ರಸ್ತೆ ವಿಭಜಕ ತೆರವುಗೊಂಡು ಸಂಚಾರಕ್ಕೆ ಅಡಚಣೆಯಾಗುತ್ತಿದ್ದು, ಅವುಗಳನ್ನು ಮುಚ್ಚಿಸಿ ನೇರ ಸಂಚಾರಕ್ಕೆ ಅನುವು ಮಾಡಿದ್ದರಿಂದ ಸಂಚಾರ ದಟ್ಟಣೆಯು ನಿಯಂತ್ರಣಗೊಂಡಿರುತ್ತದೆ.<br>3. ಪ್ರತಿದಿನ ಹೊರವರ್ತುಲ ರಸ್ತೆಯಲ್ಲಿ 3 ಖಾಸಗಿ ಟೋಯಿಂಗ್ ವಾಹನಗಳನ್ನು ಕ್ರಿಯಾತ್ಮಕವಾಗಿ ಹಾಗೂ ಸರದಿಯ ಮೇಲೆ ನಿಯೋಜಿಸಿ ಅನಧಿಕೃತವಾಗಿ ನಿಲುಗಡೆಯಾಗುತ್ತಿದ್ದ ವಾಹನಗಳನ್ನು ಸಂಪೂರ್ಣವಾಗಿ ತೆರವುಗೊಳಿಸುವ ಮುಖೇನ ಸಂಚಾರಕ್ಕೆ ಅನುವು ಮಾಡಲಾಗಿರುತ್ತದೆ.<br>4. ಹೊರವರ್ತುಲ ರಸ್ತೆಯಲ್ಲಿ 16 ಜಂಕ್ಷನ್ ಪಾಯಿಂಟ್‌ಗಳಿಗೆ 2 ಪಾಳಿಯಗಳಲ್ಲಿ ಸಿಬ್ಬಂದಿಯವರನ್ನು ನಿಯೋಜಿಸುತ್ತಿದ್ದು ಮತ್ತು 3 ಕೋಬ್ರಾ ಸಿಬ್ಬಂದಿಗಳನ್ನು ಗಸ್ತು ಕಾರ್ಯಗಳಿಗೆ ನೇಮಕ ಮಾಡಲಾಗಿರುತ್ತದೆ. ಉಸ್ತುವಾರಿ ಮತ್ತು ಸಂಚಾರ ನಿಯಮಗಳ |

| | | |
|---|---|---|
| | | ಉಲ್ಲಂಘನೆಯನ್ನು ಗುರುತಿಸಿ ಕ್ರಮ ಜರುಗಿಸಲು 5 ಎ.ಎಸ್.ಐ ಹಾಗೂ 4 ಪಿ.ಎಸ್.ಐರವರುಗಳನ್ನು ಉಸ್ತುವಾರಿಗೆ ನೇಮಕ ಮಾಡಲಾಗಿದ್ದು, 2 ಠಾಣಾಧಿಕಾರಿಗಳು ಉಸ್ತುವಾರಿಯಲ್ಲಿ ಹೊರವರ್ತುಲ ರಸ್ತೆಯ ಸಂಚಾರ ನಿಯಂತ್ರಣ ಕರ್ತವ್ಯಗಳನ್ನು ನೋಡಿಕೊಳ್ಳಲಾಗುತ್ತಿದೆ.<br>5. ಹೊರವರ್ತುಲ ರಸ್ತೆಯಲ್ಲಿ ಅನಧಿಕೃತವಾಗಿ ನಿಲುಗಡೆ ರಹಿತ ಅಧಿಸೂಚಿತ ರಸ್ತೆಯಲ್ಲಿ ನಿಲುಗಡೆಯಾಗುತ್ತಿದ್ದ ವಾಹನಗಳನ್ನು ಗುರುತಿಸಿ 2018ನೇ ಸಾಲಿನಲ್ಲಿ ಹೆಚ್.ಎಸ್.ಆರ್ ಲೇಔಟ್ ಸಂಚಾರ ಠಾಣೆಯ ಸರಹದ್ದು ವ್ಯಾಪ್ತಿಯಲ್ಲಿ 8037 ಪ್ರಕರಣಗಳನ್ನು ಹಾಗೂ ವಿಮಾನ ನಿಲ್ದಾಣ ಸಂಚಾರ ಠಾಣೆಯ ಸರಹದ್ದು ವ್ಯಾಪ್ತಿಯಲ್ಲಿ 10,967 ಪ್ರಕರಣಗಳನ್ನು ದಾಖಲು ಮಾಡಲಾಗಿರುತ್ತದೆ. ಹಾಗೂ ಕಾರ್ಯಾಚರಣೆಯನ್ನು ನಿರಂತರವಾಗಿ ಮುಂದುವರಿಸಲಾಗುತ್ತಿದೆ.<br>6. ಹೊರವರ್ತುಲ ರಸ್ತೆಯಲ್ಲಿನ ಪಾದಚಾರಿಗಳ ಸುರಕ್ಷಿತ ಸಂಚಾರಕ್ಕಾಗಿ ಈಗಾಗಲೇ 2 ಕಡೆಗಳಲ್ಲಿ ಇಕೋಸ್ಪೇಸ್ ಮತ್ತು ಬೆಳ್ಳಂದೂರು ಜಂಕ್ಷನ್ ಹತ್ತಿರ ಸ್ಕೈವಾಕ್‌ಗಳನ್ನು ನಿರ್ಮಿಸುವ ಮುಖೇನ ಪಾದಚಾರಿಗಳ ಸಂಚಾರದಿಂದ ಆಗುತ್ತಿದ್ದ ಸಂಚಾರ ದಟ್ಟಣೆಯನ್ನು ನಿಯಂತ್ರಣಗೊಳಿಸಲಾಗಿರುತ್ತದೆ.<br>7. ಕಾರ್ತಿಕ್ ನಗರದಿಂದ ಕಾಡುಬೀಸನಹಳ್ಳಿ ಜಂಕ್ಷನ್‌ವರೆಗೆ ಎತ್ತರಿಸಿದ ರಸ್ತೆ ವಿಭಜಕಗಳನ್ನು ಅಳವಡಿಸುವ ಕಾಮಗಾರಿಯು ಪ್ರಾರಂಭಗೊಂಡಿದ್ದು ಕಾರ್ತಿಕ್ ನಗರ ಜಂಕ್ಷನ್ ಹತ್ತಿರ ಸುಮಾರು 150 ಮೀಟರ್ ಎತ್ತರಿಸಿದ ರಸ್ತೆ ವಿಭಜಕವನ್ನು ಅಳವಡಿಸಿರುತ್ತಾರೆ.<br>8. ಅಗರ, ಇಬ್ಬಲೂರು, ಜೆ.ಪಿ ಮಾರ್ಗನ್, ತುಳಸಿ ಹಾಗೂ ಕಾರ್ತಿಕ್ ನಗರ ಜಂಕ್ಷನ್‌ಗಳಲ್ಲಿ ಹೆಚ್ಚಿನ ಪಾದಚಾರಿಗಳು ರಸ್ತೆಯನ್ನು ದಾಟುತ್ತಿದ್ದ ಕಾರಣಗಳಿಂದ ಮುಖ್ಯರಸ್ತೆಯ ಸಂಚಾರಕ್ಕೆ ತೀವ್ರವಾದ ಓನ್ನಡೆಯಾಗುತ್ತಿದ್ದ ಕಾರಣಗಳಿಂದ ಮತ್ತು ಅಪಘಾತಗಳನ್ನು ತಡೆಗಟ್ಟುವ ಪಾದಚಾರಿಗಳ ಹಿತದೃಷ್ಟಿಯಿಂದ ಸ್ಕೈವಾಕ್‌ಗಳನ್ನು ನಿರ್ಮಿಸಲು ಪ್ರಸ್ತಾವನೆಯನ್ನು ಸಲ್ಲಿಸಿದ್ದು ಪ್ರಗತಿಯಲ್ಲಿರುತ್ತದೆ.<br>9. ಕಾಡುಬೀಸನಹಳ್ಳಿ ಜಂಕ್ಷನ್ ಹತ್ತಿರ ವಾಹನಗಳು "ಯು" ತಿರುವು ಪಡೆದು ಸಂಚರಿಸುತ್ತಿದ್ದರಿಂದ ಅನಗತ್ಯವಾಗಿ ಸಂಚಾರ ದಟ್ಟಣೆಗೆ ಕಾರಣವಾಗುತ್ತಿರುವುದನ್ನು ಗಮನಿಸಿ "ಯು" ತಿರುವನ್ನು ಮುಚ್ಚಿಸಿದ್ದರಿಂದ ನೇರ ಸಂಚಾರವು ಸರಾಗವಾಗಿ ಹಾಯ್ದುಹೋಗಲು ಕಾರಣವಾಗಿರುತ್ತದೆ. |

ಹೆಚ್‌ಡಿ 75 ಎಸ್‌ಎಸ್‌ಟಿ 2019

(ಎಂ.ಬಿ.ಪಾಟೀಲ್)
ಗೃಹ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ:ಹೆಚ್‌ಡಿ: 76 :ಎಸ್‌ಎಸ್‌ಟಿ:2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ: 12/2/2019

33

US
13/02/19

**ಇವರಿಂದ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
ವಿಧಾನಸೌಧ, ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ವಿಧಾನ ಪರಿಷತ್/ಸಭೆ, ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಪರಿಷತ್/ಸಭೆ ಸದಸ್ಯರಾದ ಶ್ರೀ ಅರವಿಂದ ಲಿಂಬಾವಳಿ (ಮಹದೇವಪುರ) ರವರ ಚುಕ್ಕೆ ಗುರುತಿನ/ ಗುರುತಿಲ್ಲದ ಪ್ರಶ್ನೆ ಸಂ: 262 ಗೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಸಲ್ಲಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತು ರವರ ಪತ್ರ
ಸಂ: ಪ್ರಶಾಶಾ/15ನೇವಿಸ/3ಅ:ಪ್ರ ಸಂ 262/2019

\- - -

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದನ್ವಯ ಕರ್ನಾಟಕ ವಿಧಾನ ಪರಿಷತ್/ಸಭೆ ಸದಸ್ಯರಾದ ಶ್ರೀ ಅರವಿಂದ ಲಿಂಬಾವಳಿ (ಮಹದೇವಪುರ) ರವರ ಚುಕ್ಕೆ ಗುರುತಿನ/ ಗುರುತಿಲ್ಲದ ಪ್ರಶ್ನೆ ಸಂ: 262 ಗೆ ಸಂಬಂಧಿಸಿದ ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸುತ್ತಾ, ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ನಂಬುಗೆಯ,

(ಕೆ.ಪದ್ಮಿನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)
20333254, e-mail:uslo-home@karnataka.gov.in

**ಪ್ರತಿ:**

1.ಮಾನ್ಯ ಉಪ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಯವರಿಗೆ.
2.ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
3.ಸರ್ಕಾರದ ಕಾರ್ಯದರ್ಶಿ(ಪಿಸಿಎಎಸ್) ರವರ ಆಪ್ತ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
4.ಸರ್ಕಾರದ ಉಪ ಕಾರ್ಯದರ್ಶಿ(ಕಾನೂನು & ಸುವ್ಯವಸ್ಥೆ) ರವರ ಆಪ್ತ ಸಹಾಯಕರು, ಒಳಾಡಳಿತ ಇಲಾಖೆ.
5.ಸರ್ಕಾರದ ಅಧೀನ ಕಾರ್ಯದರ್ಶಿ(ಸಮನ್ವಯ), ಒಳಾಡಳಿತ ಇಲಾಖೆ.

**ಕರ್ನಾಟಕ ವಿಧಾನ ಸಭೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 262
ಸದಸ್ಯರ ಹೆಸರು : ಶ್ರೀ ಅರವಿಂದ ಲಿಂಬಾವಳಿ (ಮಹದೇವಪುರ)
ಉತ್ತರಿಸುವ ದಿನಾಂಕ : 13/02/2019.
ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಹದೇವಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ವಾಹನಗಳ ಸಂಚಾರ ದಟ್ಟಣೆ ಹೆಚ್ಚಾಗಿರುವುದರಿಂದ ಇದನ್ನು ನಿಯಂತ್ರಿಸಲು ಸಂಚಾರಿ ಪೊಲೀಸ್ ಸಿಬ್ಬಂದಿಯ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಸಂಚಾರ ದಟ್ಟಣೆಯನ್ನು ನಿಯಂತ್ರಿಸಲು ಕೊರತೆ ಇರುವ ಸಿಬ್ಬಂದಿ ನೇಮಕಾತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕೆ.ಆರ್.ಪುರ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಯು ತುಂಬಾ ವಿಶಾಲವಾಗಿರುವುದರಿಂದ, ಪ್ರಸ್ತುತ ಈ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳಿಗೆ ಸಂಚಾರ ನಿಯಂತ್ರಣ ಕರ್ತವ್ಯವನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಹೆಚ್ಚಿನ ಶ್ರಮ ವಹಿಸುತ್ತಿದ್ದಾರೆ. ಹಾಗೂ ರಸ್ತೆಗಳಲ್ಲಿ ಇತರೆ ಕಾಮಗಾರಿಗಳ ಜೊತೆಗೆ ಮೆಟ್ರೋ ಕಾಮಗಾರಿ ಸಹ ನಡೆಸುತ್ತಿದ್ದು, ಸುಗಮ ಸಂಚಾರಕ್ಕೆ ಅತೀವ ಅಡಚಣೆಯಾಗುತ್ತಿರುತ್ತದೆ.<br><br>ಈಗಿರುವ ಸಂಚಾರ ದಟ್ಟಣೆ ಮತ್ತು ಸಮಸ್ಯೆಗಳನ್ನು ಸುಗಮ ರೀತಿಯಲ್ಲಿ ನಿರ್ವಹಿಸುವ ಸಲುವಾಗಿ ಮತ್ತು ಸಾರ್ವಜನಿಕ ಹಿತದೃಷ್ಟಿಯ ಮೇರೆಗೆ ಕೆ.ಆರ್.ಪುರ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಯಿಂದ ಕಾನೂನು ಮತ್ತು ಸುವ್ಯವಸ್ಥೆಯ ಪೊಲೀಸ್ ಠಾಣೆಯಾದ ಮಹದೇವಪುರ ಪೊಲೀಸ್ ಠಾಣೆಯ ಪೂರ್ಣ ಸರಹದ್ದನ್ನು ಪ್ರತ್ಯೇಕಿಸಿ, ಹೊಸದಾಗಿ ಮಹದೇವಪುರ ಸಂಚಾರ ಪೊಲೀಸ್ ಠಾಣೆಯನ್ನು ಸೃಜಿಸಲು ಕ್ರಮ ವಹಿಸಲಾಗುತ್ತಿದೆ. |

ಹೆಚ್‌ಡಿ 76 ಎಸ್‌ಎಸ್‌ಟಿ 2019

(ಎಂ.ಬಿ.ಪಾಟೀಲ್)
ಗೃಹ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ:ಹೆಚ್‌ಡಿ 21 ಇಎಫ್‌ಎಸ್ 2019

ಕರ್ನಾಟಕ ಸರ್ಕಾರ ಸಚಿವಾಲಯ
ವಿಧಾನ ಸೌಧ,
ಬೆಂಗಳೂರು, ದಿನಾಂಕ:12.02.2019.

130
U/S
13/2/2019

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಪಾಟೀಲ್ ಬಿ.ಸಿ (ಹಿರೇಕೆರೂರು) ರವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 770ಕ್ಕೆ ಉತ್ತರಿಸುವ ಕುರಿತು.

ಉಲ್ಲೇಖ: ಪತ್ರಸಂಖ್ಯೆ:ಪ್ರಶಾವಿಸ/15ನೇವಿಸ/3ಅ/ಪ್ರ.ಸಂ.770/2019 ದಿನಾಂಕ:05.02.2019.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಪಾಟೀಲ್ ಬಿ.ಸಿ (ಹಿರೇಕೆರೂರು) ರವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 770ರ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

12.02.19

[ಎಸ್.ಎಸ್.ಗೋಪಾಲ]
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್‌ವೆಚ್ಚ).

## ಕರ್ನಾಟಕ ವಿಧಾನಸಭೆ

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 770
2] ಸದಸ್ಯರ ಹೆಸರು : ಶ್ರೀ ಪಾಟೀಲ್ ಬಿ.ಸಿ (ಹಿರೇಕೆರೂರು)
3] ಉತ್ತರಿಸುವ ದಿನಾಂಕ : 13.02.2019
4] ಉತ್ತರಿಸುವ ಸಚಿವರು : ಗೃಹ ಸಚಿವರು

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಔರಾದ್ಕರ್ ಸಮಿತಿಯ ವರದಿಯನ್ನು ಜಾರಿಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ;</td><td>
ಪೊಲೀಸ್ ಸಿಬ್ಬಂದಿ ವೇತನ ಭತ್ಯೆ ಪರಿಷ್ಕರಣೆ ಕುರಿತು ಪರಿಶೀಲಿಸಲು ಶ್ರೀ ರಾಘವೇಂದ್ರ ಔರಾದ್ಕರ್, ಐ.ಪಿ.ಎಸ್, ಎ.ಡಿ.ಜಿ.ಪಿ ಇವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ಡಿಜಿ ಮತ್ತು ಐಜಿಪಿ ರವರು ರಚಿಸಿದ್ದು, ಸದರಿ ಸಮಿತಿಯು ವರದಿಯನ್ನು ಸಿದ್ಧಪಡಿಸಿ ಡಿಜಿ ಮತ್ತು ಐಜಿಪಿ ರವರ ಮುಖಾಂತರ ದಿನಾಂಕ:26.09.2016 ರಂದು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಈ ವರದಿಯಲ್ಲಿ ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರ ವೇತನ ಭತ್ಯೆ ಪರಿಷ್ಕರಣೆಗೆ ಶಿಫಾರಸ್ಸು ಮಾಡಲಾಗಿರುತ್ತದೆ. ಈ ವರದಿಯನ್ನು ಗಮನದಲ್ಲಿ ಇರಿಸಿಕೊಂಡು ದಿನಾಂಕ:01.12.2016 ರಿಂದ ಅನ್ವಯವಾಗುವಂತೆ ಈ ಕೆಳಕಂಡ ಭತ್ಯೆಗಳನ್ನು ಸರ್ಕಾರವು ಘೋಷಿಸಿರುತ್ತದೆ.
<table>
<tr><th>ಕ್ರಸಂ</th><th>ಭತ್ಯೆಯ ವಿವರ</th><th>ಅನ್ವಯಿಸುವ ಹುದ್ದೆಗಳು</th><th>ಷರಾ</th></tr>
<tr><td>1</td><td>ಸಮವಸ್ತ್ರ ಭತ್ಯೆ</td><td>1)ಪೊಲೀಸ್ ಕಾನ್ಸ್‌ಟೇಬಲ್ ಸಹಾಯಕ ಸಬ್ ಇನ್ಸ್‌ಪೆಕ್ಟರ್ ರವರೆಗೆ<br>2)ಪೊಲೀಸ್ ಉಪ ನಿರೀಕ್ಷಕರು</td><td>ಸಮವಸ್ತ್ರ ಭತ್ಯೆಯನ್ನು ಪ್ರಸ್ತುತ ಮಾಸಿಕ ರೂ.100 ಇದ್ದು, ಅದನ್ನು ಪರಿಷ್ಕರಿಸಿ ಮಾಸಿಕ ರೂ.500 ಕ್ಕೆ ಹೆಚ್ಚಿಸಲಾಗಿದೆ.</td></tr>
<tr><td>2</td><td>ಸಾರಿಗೆ ಭತ್ಯೆ</td><td>1)ಅನುಯಾಯಿಗಳು<br>2) ಪೊಲೀಸ್ ಕಾನ್ಸ್‌ಟೇಬಲ್ ಸಹಾಯಕ ಸಬ್ ಇನ್ಸ್‌ಪೆಕ್ಟರ್ ರವರೆಗೆ<br>3)ಪೊಲೀಸ್ ಉಪ ನಿರೀಕ್ಷಕರು</td><td>ಸಾರಿಗೆ ಭತ್ಯೆಯನ್ನು ಮಾಸಿಕ ರೂ.600/- ಅನ್ನು ಮಂಜೂರಿಸಲಾಗಿದೆ.</td></tr>
<tr><td>3</td><td>ಅಪಾಯ ನಿರ್ವಹಣಾ ಭತ್ಯೆ</td><td>1)ಅನುಯಾಯಿಗಳು<br>2)ಪೊಲೀಸ್ ಕಾನ್ಸ್‌ಟೇಬಲ್ ಸಹಾಯಕ ಸಬ್ ಇನ್ಸ್‌ಪೆಕ್ಟರ್ ರವರೆಗೆ<br>3)ಪೊಲೀಸ್ ಉಪ ನಿರೀಕ್ಷಕರು</td><td>ಕಷ್ಟ ಪರಿಹಾರ ಭತ್ಯೆ (Hardship Allowance) ಮಾಸಿಕ ರೂ.1000/- ಅನ್ನು ಮಂಜೂರಿಸಲಾಗಿದೆ.</td></tr>
<tr><td></td><td></td><td>ಒಟ್ಟು</td><td>ರೂ.2000/-</td></tr>
</table>
</td></tr>
</table>

|  |  | ಮುಂದುವರೆದು, 2019-20 ಸಾಲಿನ ಆಯವ್ಯಯ ಭಾಷಣ ಕಂಡಿಕೆ 320 ರಲ್ಲಿ ಪೊಲೀಸ್ ಪೇದೆಗಳಿಗೆ ನೀಡಲಾಗುತ್ತಿರುವ ಕಷ್ಟ ಪರಿಹಾರ ಭತ್ಯೆಯನ್ನು ರೂ.1000/- ಗಳಿಂದ ರೂ.2000/-ಗಳಿಗೆ ಹೆಚ್ಚಿಸಲು ಘೋಷಿಸಲಾಗಿರುತ್ತದೆ. |
|---|---|---|
| ಈ) | ಹಾಗಿದ್ದಲ್ಲಿ, ಪೊಲೀಸ್ ವೇತನ ಹೆಚ್ಚಳ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿದೆ. |
| ಇ) | ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು)? |  |

**ಹೆಚ್‌ಡಿ 21 ಇಎಫ್‌ಎಸ್ 2019**

[ಎಂ.ಬಿ. ಪಾಟೀಲ]
ಗೃಹ ಸಚಿವರು.

**ಕರ್ನಾಟಕ ಸರ್ಕಾರ**

ಹೆಚ್‌ಡಿ 11 ಪಿಬಿಎಲ್ 2019

ಕರ್ನಾಟಕ ಸರ್ಕಾರ ಸಚಿವಾಲಯ
ವಿಧಾನ ಸೌಧ,
ಬೆಂಗಳೂರು, ದಿನಾಂಕ:12/02/2019

184
U/S
13/2/2019

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ,
ಬೆಂಗಳೂರು

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಸೋಮಶೇಖರ್ ಎಸ್.ಟಿ (ಯಶವಂತಪುರ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:223 ಕ್ಕೆ ಉತ್ತರ ನೀಡುವ ಕುರಿತು.

ಉಲ್ಲೇಖ: ಪ.ಸಂ:ಪ್ರಶಾವಿಸ/15ನೇವಿಸ/3ಅ/ಪ್ರ.ಸಂ.223/2019, ದಿ:30/01/2019.

* * * *

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಸೋಮಶೇಖರ್ ಎಸ್.ಟಿ (ಯಶವಂತಪುರ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:223 ಕ್ಕೆ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

12.02.19

[ಎಸ್.ಎಸ್.ಗೋಪಾಲ]
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್‌ವೆಚ್ಚ).

# ಕರ್ನಾಟಕ ವಿಧಾನಸಭೆ

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 223

2] ಸದಸ್ಯರ ಹೆಸರು : ಶ್ರೀ ಸೋಮಶೇಖರ್ ಎಸ್.ಟಿ (ಯಶವಂತಪುರ)

3] ಉತ್ತರಿಸುವ ದಿನಾಂಕ : 13.02.2019

4] ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಯಶವಂತಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಗೃಹ ಇಲಾಖೆಯ ಸುಪರ್ದಿಗೆ ಮಂಜೂರಾಗಿರುವ ಜಾಗಗಳೆಷ್ಟು;(ವಿವರ ನೀಡುವುದು) | ಯಶವಂತಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಗೃಹ ಇಲಾಖೆಯ ಸುಪರ್ದಿಗೆ ಮಂಜೂರಾಗಿರುವ ಜಾಗಗಳ ವಿವರ ಈ ಕೆಳಕಂಡಂತಿದೆ.<br><br>1. ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೆಂಗೇರಿ ಗ್ರಾಮದ ಸರ್ವೆ ನಂ.347/1, ಖಾತಾ ನಂ.485/447/347/1 ರಲ್ಲಿ 1 ಎಕರೆ, 1 ಗುಂಟೆ ಜಮೀನು<br>2. ಕೆಂಗೇರಿ ಪೊಲೀಸ್ ಠಾಣಾ ಸರಹದ್ದಿನ ವಳಗೆರೆಹಳ್ಳಿ ಬಳಿ ಸರ್ವೆ ನಂ.63 ಮತ್ತು 64 ರಲ್ಲಿ 4 ಎಕರೆ ಜಮೀನು.<br>3. ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಉಲ್ಲಾಳ ಗ್ರಾಮದ ಸರ್ವೆ ನಂ. 199/11 ರಲ್ಲಿ 21 ಎಕರೆ 34 ಗುಂಟೆ ಸರ್ಕಾರಿ ಜಮೀನು.<br>4. 1995 ರಲ್ಲಿ ತಲಘಟ್ಟಪುರ ಗ್ರಾಮ ಠಾಣಾ ಬಿ.ಬಿ.ಎಂ.ಪಿ ಸ್ವತ್ತಿನ ಸಂಖ್ಯೆ:111 ಮತ್ತು112 ಗುರುತು ಸಂಖ್ಯೆ: ಆರ್4ಬಿ–180–ಎ ಎಂಬ 7320 ಚ.ಅಡಿ.<br>5. ಬ್ಯಾಡರಹಳ್ಳಿ ಪೊಲೀಸ್ ಠಾಣೆಗೆ ಹೇರೋಹಳ್ಳಿ ಸ.ನಂ–36 ರಲ್ಲಿ 19 ಗುಂಟೆ.<br>6. ಕುಂಬಳಗೂಡು ಪೊಲೀಸ್ ಠಾಣೆ ಸ.ನಂ–30 ರಲ್ಲಿ 1 ಎಕರೆ.<br>7. ಕಗ್ಗಲಿಪುರ ಗ್ರಾಮದ ಸ.ನಂ.222 ರಲ್ಲಿ 1 ಎಕರೆ |
| ಆ) | ಹಾಲಿ ಈ ಜಾಗಗಳಲ್ಲಿ ಗೃಹ ಇಲಾಖೆಯು ಕೈಗೊಂಡಿರುವ ಕಾಮಗಾರಿಗಳಾವುವು; | ಕೆಂಗೇರಿ ಪೊಲೀಸ್ ಠಾಣಾ ಸರಹದ್ದಿನ ವಳಗೆರೆಹಳ್ಳಿ ಬಳಿ ಸರ್ವೆ ನಂ.63 ಮತ್ತು 64 ರಲ್ಲಿ 4 ಎಕರೆ ಜಮೀನಿನಲ್ಲಿ 76 ಪೊಲೀಸ್ ವಸತಿ ಗೃಹಗಳಿದ್ದು, ಕೆ.ಎಸ್.ಪಿ.ಹೆಚ್ & ಐ.ಡಿ.ಸಿ.ಎಲ್ ರವರಿಂದ 128 ಪೊಲೀಸ್ ವಸತಿ ಗೃಹಗಳನ್ನು ನಿರ್ಮಾಣವಾಗುತ್ತಿದೆ.<br>ಉಳಿದ ಸ್ಥಳಗಳಲ್ಲಿ ಯಾವುದೇ ಕಾಮಗಾರಿ ನಡೆಯುತ್ತಿಲ್ಲ. |

| ಇ) | ಈ ಕ್ಷೇತ್ರ ವ್ಯಾಪ್ತಿಯ ಪೊಲೀಸ್ ಠಾಣೆ, ವಸತಿ ಗೃಹ ಹಾಗೂ ಕಟ್ಟಡಗಳ ನವೀಕರಣ/ಹೊಸ ನಿರ್ಮಾಣ ಕಾಮಗಾರಿಗಳು ವಿಳಂಬವಾಗುತ್ತಿರಲು ಕಾರಣಗಳೇನು? (ವಿವರ ನೀಡುವುದು) | ಉಲ್ಲಾಳ ಗ್ರಾಮದ ಸರ್ವೆ ನಂ. 199/11 ರಲ್ಲಿ 21 ಎಕರೆ 34 ಗುಂಟೆ ಸರ್ಕಾರಿ ಜಮೀನು ಇದ್ದು, ಈ ಜಮೀನಿಗೆ ಸಂಬಂಧಿಸಿದಂತೆ ಮಾನ್ಯ ರಾಜ್ಯ ಉಚ್ಚ ನ್ಯಾಯಲಯದಲ್ಲಿ ದಾಖಲಾಗಿರುವ ಪ್ರಕರಣಗಳ ಸಂಖ್ಯೆ: 52118/ 2017 ಮತ್ತು 56154-155/2017 ರಲ್ಲಿ ಮಾನ್ಯ ನ್ಯಾಯಾಲಯವು ಸದರಿ ಪ್ರಕರಣಗಳ ವಿಚಾರಣೆ ಮುಗಿಯುವವರೆವಿಗೂ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವಂತೆ ಆದೇಶವನ್ನು ನೀಡಿದ್ದರಿಂದ ಯಾವುದೇ ಕಾಮಗಾರಿ ಕೈಗೊಂಡಿರುವುದಿಲ್ಲ.<br><br>ಯಶವಂತಪುರ ವಿಧಾನ ಸಭಾ ಕ್ಷೇತ್ರದಲ್ಲಿ ಬರುವ ಕೆಂಗೇರಿಯಲ್ಲಿ 128 ಪಿಸಿ ವಸತಿ ಗೃಹಗಳ ನಿರ್ಮಾಣಕ್ಕಾಗಿ ನಿವೇಶನ ಖಾತಾ ಹಾಗೂ ಇತರೆ ಮೂಲ ದಾಖಲೆಗಳನ್ನು ಪಡೆಯಲು ವಿಳಂಬವಾಗಿದ್ದು, ಲಾರಿ ಮುಷ್ಕರದ ಹಾಗೂ ಚುನಾವಣೆಯ ಕಾರಣ, ಮಳೆಯ ಅವಧಿಯಲ್ಲಿ ಕೆಲಸ ನಿಂತಿದ್ದರಿಂದ ಕೂಲಿ ಕಾರ್ಮಿಕರು ಸ್ಥಳ ಬದಲಾಯಿಸಿದ ಕಾರಣ, ಪುನಃ ಕೂಲಿ ಕಾರ್ಮಿಕರನ್ನು ಕರೆತರುವಲ್ಲಿನ ತೊಂದರೆ, ಅಗ್ನಿಶಾಮಕ ಮತ್ತು ಬೆಸ್ಕಾಂ ಇಲಾಖೆಗಳಿಂದ ನಿರಾಕ್ಷೇಪಣಾ ಪತ್ರ ಪಡೆಯುವುದು ಇಂತಹ ಕಾರಣಗಳಿಂದ ಕಾಮಗಾರಿ ಮುಕ್ತಾಯಗೊಳ್ಳುವಲ್ಲಿ ವಿಳಂಬವಾಗಿರುತ್ತದೆ. ಈ ಕಾಮಗಾರಿಯು ಫೆಬ್ರವರಿ 2019 ರ ಅಂತ್ಯಕ್ಕೆ ಪೂರ್ಣಗೊಳ್ಳುವ ಸಾಧ್ಯತೆ ಇದೆ. |
|---|---|---|

**ಹೆಚ್‌ಡಿ 11 ಪಿಬಿಎಲ್ 2019**

[ಎಂ.ಬಿ. ಪಾಟೀಲ]
ಗೃಹ ಸಚಿವರು

**ಕರ್ನಾಟಕ ಸರ್ಕಾರ**

ಹೆಚ್‌ಡಿ 13 ಪಿಓಪಿ 2019

ಕರ್ನಾಟಕ ಸರ್ಕಾರ ಸಚಿವಾಲಯ
ವಿಧಾನ ಸೌಧ,
ಬೆಂಗಳೂರು, ದಿನಾಂಕ:12.02.2019.

206
U/S
13/2/2019

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ,
ಬೆಂಗಳೂರು

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ತನ್ವೀರ್ ಸೇಠ್ ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:1082ಗೆ ಉತ್ತರಿಸುವ ಕುರಿತು.

ಉಲ್ಲೇಖ: ಪತ್ರ ಸಂಖ್ಯೆ:ಪ್ರಶಾವಿಸ:15ನೇವಿಸ/3ಅ/ಪ್ರ.ಸಂ.1082/2019, ದಿ:05.02.2019.

*******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ತನ್ವೀರ್ ಸೇಠ್ ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:1082 ರ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

12.02.19

[ಎಸ್.ಎಸ್.ಗೋಪಾಲ]
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಪೊಲೀಸ್‌ವೆಚ್ಚ).

12/2/19

# ಕರ್ನಾಟಕ ವಿಧಾನಸಭೆ

| | | | |
|---|---|---|---|
| 1] | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1082** |
| 2] | ಸದಸ್ಯರ ಹೆಸರು | : | ಶ್ರೀ ತನ್ವೀರ್ ಸೇಠ್ (ನರಸಿಂಹರಾಜ) |
| 3] | ಉತ್ತರಿಸುವ ದಿನಾಂಕ | : | 13.02.2019. |
| 4] | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ನಗರದ ನರಸಿಂಹರಾಜ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಬನ್ನಿಮಂಟಪ ಹಾಗೂ ಯರಗಹಳ್ಳಿಯಲ್ಲಿ ಎರಡು ನೂತನ ಪೊಲೀಸ್ ಠಾಣೆಗಳನ್ನು ಪ್ರಾರಂಭಿಸಲು ಪ್ರಸ್ತಾವನೆಗಳು ಸಲ್ಲಿಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಪ್ರಸ್ತಾವನೆ ಸಲ್ಲಿಕೆಯಾದ ದಿನಾಂಕ ಒದಗಿಸುವುದು) | ಮೈಸೂರು ನಗರದ ನರಸಿಂಹರಾಜ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಬನ್ನಿಮಂಟಪ ಹಾಗೂ ಯರಗನಹಳ್ಳಿಯಲ್ಲಿ ಪೊಲೀಸ್ ಠಾಣೆಗಳನ್ನು ತೆರೆಯುವ ಸಂಬಂಧ ಯಾವುದೇ ಪ್ರಸ್ತಾವನೆ ಪೊಲೀಸ್ ಇಲಾಖೆಯ ಮುಂದೆ ಇರುವುದಿಲ್ಲ. |
| ಆ | ಈ ಪೊಲೀಸ್ ಠಾಣೆಗಳನ್ನು ನೂತನವಾಗಿ ಮಂಜೂರು ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| ಇ | ನರಸಿಂಹರಾಜ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರಸ್ತುತ ಎಷ್ಟು ಪೊಲೀಸ್ ಠಾಣೆಗಳಿವೆ; ಈ ಠಾಣೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು ಹಾಗೂ ಕೊರತೆ ಇರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; (ಹುದ್ದೆವಾರು ಮಾಹಿತಿ ಒದಗಿಸುವುದು) | ನರಸಿಂಹರಾಜ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರಸ್ತುತ 08 ಪೊಲೀಸ್ ಠಾಣೆಗಳಿರುತ್ತವೆ.<br>ಸದರಿ ಠಾಣೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಮಂಜೂರಾತಿ ಬಲ, ಹಾಲಿ ಬಲ ಹಾಗೂ ರಿಕ್ತ ಸ್ಥಾನದ ಹುದ್ದೆವಾರು ಮಾಹಿತಿಯನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಈ | ಕೊರತೆ ಇರುವ ಸಿಬ್ಬಂದಿಗಳನ್ನು ನೇಮಕ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಮೈಸೂರು ನಗರ ಪೊಲೀಸ್ ಘಟಕದಲ್ಲಿ 2016-17 & 2017-18ನೇ ಸಾಲಿನಲ್ಲಿ ನೇಮಕಾತಿ ಹೊಂದಿದ ಒಟ್ಟು 27 ಪಿಎಸ್‌ಐ(ಸಿವಿಲ್) ರವರು ಪ್ರಸ್ತುತ ಪಿಟಿಸಿ, ಕಲಬುರಗಿಯಲ್ಲಿ ತರಬೇತಿಯಲ್ಲಿರುತ್ತಾರೆ. ತರಬೇತಿ ಮುಗಿದ ಕೂಡಲೇ ಕೊರತೆ ಇರುವ ಠಾಣೆಗಳಿಗೆ ಆದ್ಯತೆ ಮೇಲೆ ನಿಯೋಜಿಸಲಾಗುವುದು.<br><br>ಮೈಸೂರು ನಗರ ಪೊಲೀಸ್ ಘಟಕದಲ್ಲಿ ಈಗಾಗಲೇ ನೇಮಕಾತಿ ಹೊಂದಿರುವ 120 ಸಿಪಿಸಿ ಹಾಗೂ 32 |

| | | |
|---|---|---|
| | | ಮಪಿಸಿ ರವರು ಮೂಲ ತರಬೇತಿಯನ್ನು ಪಡೆಯುತ್ತಿದ್ದು, ಸದರಿಯವರು ಮೂಲ ತರಬೇತಿಯನ್ನು ಪೂರ್ಣಗೊಳಿಸಿದ ನಂತರ ಹಾಲಿ ಇರುವ ರಿಕ್ತ ಸ್ಥಾನಗಳಿಗೆ ನಿಯೋಜಿಸಲು ಕ್ರಮಕೈಗೊಳ್ಳಲಾಗುತ್ತದೆ.<br><br>2018-19ನೇ ಸಾಲಿಗೆ 72 ಸಿಪಿಸಿ/ಮಪಿಸಿ ಹುದ್ದೆಗಳ ನೇಮಕಾತಿ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ದಿನಾಂಕ: 27.01.2019 ರಂದು ಲಿಖಿತ ಪರೀಕ್ಷೆ ನಡೆಸಲಾಗಿರುತ್ತದೆ. ಇದೇ ಸಾಲಿಗೆ 09 ಪಿ.ಎಸ್.ಐ (ಸಿವಿಲ್) ಹುದ್ದೆಗಳಿಗೆ ನೇಮಕಾತಿ ಪ್ರಕ್ರಿಯೆ ಜಾರಿಯಲ್ಲಿದ್ದು, ದಿನಾಂಕ:13.01.2019 ರಂದು ಲಿಖಿತ ಪರೀಕ್ಷೆಯನ್ನು ನಡೆಸಲಾಗಿರುತ್ತದೆ. |

**ಹೆಚ್‌ಡಿ 13 ಪಿಓಪಿ 2019**

[ಎಂ.ಬಿ. ಪಾಟೀಲ]
ಗೃಹ ಸಚಿವರು.

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ತನ್ವೀರ್ ಸೇಠ್ (ನರಸಿಂಹರಾಜ) ರವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 1082 ರ ಅನುಬಂಧ

| ಕ್ರಸಂ | ಠಾಣೆಯ ಹೆಸರು | ಹುದ್ದೆ | ಮಂಜೂರಾತಿ ಬಲ | ಹಾಲಿ ಬಲ | ರಿಕ್ತ ಸ್ಥಾನ |
|---|---|---|---|---|---|
| 1 | ನರಸಿಂಹ ರಾಜ ಠಾಣೆ | ಪಿ.ಐ | 01 | 01 | 00 |
| | | ಪಿಎಸ್ಐ | 02 | 0 | 02 |
| | | ಎಎಸ್ಐ | 08 | 07 | 01 |
| | | ಸಿಹೆಚ್ಸಿ | 29 | 25 | 04 |
| | | ಸಿಪಿಸಿ | 48 | 34 | 14 |
| 2 | ಮಂಡಿ ಠಾಣೆ | ಪಿ.ಐ | 01 | 01 | 00 |
| | | ಪಿಎಸ್ಐ | 02 | 0 | 02 |
| | | ಎಎಸ್ಐ | 08 | 07 | 01 |
| | | ಸಿಹೆಚ್ಸಿ | 30 | 30 | 00 |
| | | ಸಿಪಿಸಿ | 48 | 35 | 13 |
| 3 | ಲಷ್ಕರ್ ಠಾಣೆ | ಪಿ.ಐ | 01 | 01 | 00 |
| | | ಪಿಎಸ್ಐ | 02 | 01 | 01 |
| | | ಎಎಸ್ಐ | 08 | 08 | 00 |
| | | ಸಿಹೆಚ್ಸಿ | 28 | 28 | 00 |
| | | ಸಿಪಿಸಿ | 48 | 35 | 13 |
| 4 | ನಜರ್‌ಬಾದ್ ಠಾಣೆ | ಪಿ.ಐ | 01 | 01 | 00 |
| | | ಪಿಎಸ್ಐ | 02 | 01 | 01 |
| | | ಎಎಸ್ಐ | 10 | 09 | 01 |
| | | ಸಿಹೆಚ್ಸಿ | 24 | 24 | 00 |
| | | ಸಿಪಿಸಿ | 48 | 41 | 07 |
| 5 | ಉದಯಗಿರಿ ಠಾಣೆ | ಪಿ.ಐ | 01 | 01 | 00 |
| | | ಪಿಎಸ್ಐ | 02 | 01 | 01 |
| | | ಎಎಸ್ಐ | 10 | 08 | 02 |
| | | ಸಿಹೆಚ್ಸಿ | 29 | 28 | 01 |
| | | ಸಿಪಿಸಿ | 48 | 39 | 09 |
| 6 | ಆಲನಹಳ್ಳಿ ಠಾಣೆ | ಪಿ.ಐ | 01 | 01 | 00 |
| | | ಪಿಎಸ್ಐ | 02 | 0 | 02 |
| | | ಎಎಸ್ಐ | 08 | 08 | 00 |
| | | ಸಿಹೆಚ್ಸಿ | 20 | 20 | 00 |
| | | ಸಿಪಿಸಿ | 48 | 38 | 10 |
| 7 | ಮಹಿಳಾ ಠಾಣೆ | ಪಿ.ಐ | 01 | 0 | 01 |
| | | ಪಿಎಸ್ಐ | 01 | 0 | 01 |
| | | ಎಎಸ್ಐ | 03 | 03 | 00 |
| | | ಸಿಹೆಚ್ಸಿ | 06 | 06 | 00 |
| | | ಸಿಪಿಸಿ | 20 | 20 | 00 |
| 8 | ನರಸಿಂಹರಾಜ ಸಂಚಾರ ಠಾಣೆ | ಪಿ.ಐ | 01 | 01 | 00 |
| | | ಪಿಎಸ್ಐ | 02 | 01 | 01 |
| | | ಎಎಸ್ಐ | 07 | 06 | 01 |
| | | ಸಿಹೆಚ್ಸಿ | 27 | 27 | 00 |
| | | ಸಿಪಿಸಿ | 48 | 36 | 12 |
| | | ಒಟ್ಟು | **634** | **533** | **101** |

**ಕರ್ನಾಟಕ ಸರ್ಕಾರ**

ಹೆಚ್‌ಡಿ 12 ಪಿಓಪಿ 2019

ಕರ್ನಾಟಕ ಸರ್ಕಾರ ಸಚಿವಾಲಯ
ವಿಧಾನ ಸೌಧ,
ಬೆಂಗಳೂರು, ದಿನಾಂಕ:12.02.2019.

56
U/S
13/2/2019

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ,
ಬೆಂಗಳೂರು

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಭೀಮಾ ನಾಯ್ಕ ಎಲ್.ಬಿ.ಪಿ (ಹಗರಿಬೊಮ್ಮನಹಳ್ಳಿ) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:1068ಗೆ ಉತ್ತರಿಸುವ ಕುರಿತು.

ಉಲ್ಲೇಖ: ಪತ್ರ ಸಂಖ್ಯೆ:ಪ್ರಶಾವಿಸ:15ನೇವಿಸ/3ಅ/ಪ್ರ.ಸಂ.1068/2019, ದಿ:06.02.2019.

*******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಭೀಮಾ ನಾಯ್ಕ ಎಲ್.ಬಿ.ಪಿ (ಹಗರಿಬೊಮ್ಮನಹಳ್ಳಿ)ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:1068 ರ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

12.02.19

**[ಎಸ್.ಎಸ್.ಗೋಪಾಲ]**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಪೊಲೀಸ್‌ವೆಚ್ಚ).

12/2/19

# ಕರ್ನಾಟಕ ವಿಧಾನಸಭೆ

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1068**

2] ಸದಸ್ಯರ ಹೆಸರು : ಶ್ರೀ ಭೀಮಾ ನಾಯ್ಕ ಎಲ್.ಬಿ.ಪಿ (ಹಗರಿಬೊಮ್ಮನಹಳ್ಳಿ)

3] ಉತ್ತರಿಸುವ ದಿನಾಂಕ : 13.02.2019.

4] ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಗರಿಬೊಮ್ಮನಹಳ್ಳಿ ಪಟ್ಟಣದಲ್ಲಿ ಶಿವಮೊಗ್ಗ-ಹೊಸಪೇಟೆ ರಾಜ್ಯ ಹೆದ್ದಾರಿ ಹಾದು ಹೋಗುತ್ತಿದ್ದು, ಇಲ್ಲಿ ಸಂಚಾರ ದಟ್ಟಣೆ ಹೆಚ್ಚಾಗಿರುವುದರಿಂದ ಹಗರಿಬೊಮ್ಮಹಳ್ಳಿಯಲ್ಲಿ ಹೊಸದಾಗಿ ಸಂಚಾರಿ ಪೊಲೀಸ್ ಠಾಣೆ ಮಂಜೂರು ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ಮಾನ್ಯ ಶಾಸಕರು, ಹಗರಿಬೊಮ್ಮನಹಳ್ಳಿಯಲ್ಲಿ ಹೊಸದಾಗಿ ಸಂಚಾರಿ ಪೊಲೀಸ್ ಠಾಣೆ ಮಂಜೂರು ಮಾಡುವ ಕುರಿತು ದಿನಾಂಕ: 05.12.2018 ರಂದು ಪೊಲೀಸ್ ಇಲಾಖೆಗೆ ಮನವಿಯನ್ನು ಸಲ್ಲಿಸಿದ್ದು, ಈ ಸಂಬಂಧ, ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ರವರಿಗೆ ಪರಿಶೀಲಿಸಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಪೊಲೀಸ್ ಇಲಾಖೆಯ ಪ್ರಧಾನ ಕಛೇರಿಯ ಪತ್ರ ಸಂಖ್ಯೆ: ಆರ್.ಎಲ್.ಎನ್.(4)48/2018-19, ದಿನಾಂಕ: 28.12.2018ರಲ್ಲಿ ಕೋರಲಾಗಿರುತ್ತದೆ. ಪ್ರಸ್ತುತ ವಿಷಯವು ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ರವರ ಪರಿಶೀಲನೆಯಲ್ಲಿರುತ್ತದೆ. |
| ಆ) | ಬಂದಿದ್ದಲ್ಲಿ, ಯಾವಾಗ ಸದರಿ ಪೊಲೀಸ್ ಠಾಣೆ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | |

**ಹೆಚ್‌ಡಿ 12 ಪಿಓಪಿ 2019**

[ಎಂ.ಬಿ. ಪಾಟೀಲ]
ಗೃಹ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 49 ಮೈಅಪ್ರಾ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 12.02.2019.

108 U/S
13/2/19

ಇಂದ,

ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ಬೆಂಗಳೂರು.

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ಬೆಂಗಳೂರು.

ಮಾನ್ಯರೇ,

ವಿಷಯ: ಕರ್ನಾಟಕ ವಿಧಾನಸಭೆ ಚುಕ್ಕೆ ಗುರುತಿಲ್ಲದ ಪ್ರಶ್ನೆ 881ಕ್ಕೆ ಉತ್ತರಿಸುವ ಬಗ್ಗೆ.

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಮಂಜುನಾಥ್. ಎ (ಮಾಗಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 881ಕ್ಕೆ ಉತ್ತರದ 250 ಪ್ರತಿಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಇದರೊಂದಿಗೆ ಲಗತ್ತಿಸಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

(ನಾಗರಾಜ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 881 |
| ಸದಸ್ಯರ ಹೆಸರು | : | ಶ್ರೀ ಮಂಜುನಾಥ್.ಎ (ಮಾಗಡಿ) |
| ಉತ್ತರಿಸಬೇಕಾಗಿದ್ದ ದಿನಾಂಕ | : | 13.02.2019 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಯವರು. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಿ.ಎಂ.ಐ.ಸಿ.ಎ.ಪಿ.ಎ ವ್ಯಾಪ್ತಿಯಲ್ಲಿ ಪುರಸಭೆ / ಪಟ್ಟಣ ಪಂಚಾಯಿತಿಗಳಲ್ಲಿ ನಕ್ಷೆ ಅನುಮೋದನೆ / ಅನುಮತಿ ಪಡೆಯಲು ಆಗುತ್ತಿರುವ ತೊಂದರೆ ಸರ್ಕಾರದ ಗಮನಕ್ಕೆ ಬಂದಿದೆಯೇ | ಇಲ್ಲ |
| ಆ) | 2001 ರಿಂದ 2012ರವರೆಗೆ ಸಕ್ಷಮ ಪ್ರಾಧಿಕಾರಗಳು ನೀಡಿರುವ ಭೂ ಪರಿವರ್ತನೆ ಆಧಾರದ ಮೇಲೆ ಖಾತೆಗಳನ್ನು ನೀಡಲು ಅವಕಾಶ ಕಲ್ಪಿಸಲಾಗಿದೆಯೇ(ಮಾಹಿತಿ ಒದಗಿಸುವುದು) | ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಪ್ರದೇಶ ಯೋಜನಾ ಪ್ರಾಧಿಕಾರದ ಸ್ಥಳೀಯ ಯೋಜನಾ ಪ್ರದೇಶವನ್ನು ದಿನಾಂಕ 13.07.1999ರಂದು ಘೋಷಿಸಲ್ಪಟ್ಟಿದ್ದು, ನಂತರ ಸರ್ಕಾರದ ಅಧಿಸೂಚನೆ ಸಂಖ್ಯೆ: ನೆಅಇ 377 ಎಂಐಬಿ 98, ದಿನಾಂಕ:05.10.1999ರಂತೆ ಬೆಂಗಳೂರು-ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಪ್ರದೇಶ ಯೋಜನಾ ಪ್ರಾಧಿಕಾರವು ರಚನೆಯಾಗಿರುತ್ತದೆ. ಹೀಗೆ ಯೋಜನಾ ಪ್ರಾಧಿಕಾರವು ರಚನೆಯಾದ ದಿನಾಂಕದಿಂದ ಯೋಜನಾ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಯಾವುದೇ ಅಭಿವೃದ್ಧಿಗಳನ್ನು ಕೈಗೊಳ್ಳುವ ಮುನ್ನ ಕಡ್ಡಾಯವಾಗಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 17ರನ್ವಯ ವಿನ್ಯಾಸ ಅನುಮೋದನೆ ಪಡೆದ ನಂತರ, ಸ್ಥಳೀಯ ಸಂಸ್ಥೆಗಳು ಖಾತೆ ತೆರೆಯಬೇಕಾಗಿರುತ್ತದೆ.<br><br>ಆದುದ್ದರಿಂದ, ಸಕ್ಷಮ ಪ್ರಾಧಿಕಾರಗಳು ನೀಡಿರುವ ಭೂ ಪರಿವರ್ತನೆ ಆಧಾರದ ಮೇಲೆ ಖಾತೆಗಳನ್ನು ನೀಡಲು ಅವಕಾಶವಿರುವುದಿಲ್ಲ. |
| ಇ) | 2012ರ ನಂತ ಬಿ.ಎಂ.ಐ.ಸಿ.ಎ.ಪಿ.ಎ ಯಿಂದ ನಕ್ಷೆ ಅನುಮೋದನೆ / ಅನುಮತಿ ಪಡೆಯಲು ಆಗುತ್ತಿರುವ ತೊಂದರೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ |
| ಈ) | ಬಂದಿದ್ದಲ್ಲಿ, ಈ ಹಿಂದೆ 2001 ರಿಂದ 2012ರವರೆಗೆ ಸಕಷಮ ಪ್ರಾಧಿಕಾರ ಪುರಸಭೆ/ಪಟ್ಟಣ ಪಂಚಾಯಿತಿಗಳಿಂದ ಪಡೆದಿರುವ ನಕ್ಷೆ ಅನುಮೋದನೆ ಹಾಗೂ ಖಾತೆಗಳನ್ನು ಊರ್ಜಿತಗೊಳಿಸಲಾಗುವುದೇ? (ವಿವರ ನೀಡುವುದು) | ಪ್ರಾಧಿಕಾರದ ವ್ಯಾಪ್ತಿಯಲ್ಲಿ ಯಾವುದೇ ಅಭಿವೃದ್ಧಿಗಳನ್ನು ಕೈಗೊಳ್ಳುವ ಮುನ್ನ ಕಡ್ಡಾಯವಾಗಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 17ರನ್ವಯ ವಿನ್ಯಾಸ ಅನುಮೋದನೆ ಪಡೆದ ನಂತರ, ಸ್ಥಳೀಯ ಸಂಸ್ಥೆಗಳು ಖಾತೆ ತೆರೆಯಬೇಕಾಗಿರುತ್ತದೆ. ಹೀಗೆ ಖಾತೆ ತೆರೆದ ನಿವೇಶನಗಳಿಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 15ರನ್ವಯ ಕಟ್ಟಡ ನಕ್ಷೆ ಅನುಮೋದನೆಗಳನ್ನು ಪ್ರಾಧಿಕಾರದಿಂದ ಪಡೆಯುವುದು ಕಡ್ಡಾಯವಾಗಿರುತ್ತದೆ. ಒಂದುವೇಳೆ, ಪ್ರಾಧಿಕಾರದ ಪೂರ್ವಾನುಮೋದನೆ ಪಡೆಯದೇ ಸ್ಥಳೀಯ ಸಂಸ್ಥೆಯಲ್ಲಿ ಖಾತೆ ತೆರೆದಿದ್ದಲ್ಲಿ ಹಾಗೂ ಕಟ್ಟಡ ನಕ್ಷೆ ಅನುಮೋದನೆ ನೀಡಿದ್ದಲ್ಲಿ ಸದರಿ ಕ್ರಮವು ಊರ್ಜಿತವಾಗುವುದಿಲ್ಲ. |

**ಸಂಖ್ಯೆ: ನಅಇ 49 ಮೈಅಪ್ರಾ 2019**

(ಜಿ.ಪರಮೇಶ್ವರ)
ಉಪ ಮುಖ್ಯಮಂತ್ರಿ.

**ಕರ್ನಾಟಕ ಸರ್ಕಾರ**

**ಸಂಖ್ಯೆ: ವಿಯಇ 30 ವಿತ್ರಮ 2019**

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
5ನೇ ಮಹಡಿ, 5ನೇ ಹಂತ,
ಬೆಂಗಳೂರು, ದಿನಾಂಕ:12/02/2019

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

39 U/S
13/2/19

**ಗೆ:**
**ಕಾರ್ಯದರ್ಶಿ,**
**ಕರ್ನಾಟಕ ವಿಧಾನ ಸಭೆ,**
**ವಿಧಾನಸೌಧ,**
**ಬೆಂಗಳೂರು**

ಮಾನ್ಯರೇ,

**ವಿಷಯ:-** ಕರ್ನಾಟಕ ವಿಧಾನಸಭಾ ಸದಸ್ಯರಾದ ಮಾನ್ಯ ಶ್ರೀ ಬಸವನಗೌಡ ದದ್ದಲ್ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆಗಳ ಸಂಖ್ಯೆ:885ಕ್ಕೆ ಉತ್ತರಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಮಾನ್ಯ ಶ್ರೀ ಬಸವನಗೌಡ ದದ್ದಲ್ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:885 ರ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲಾಗಿದೆ.

ತಮ್ಮ ನಂಬುಗೆಯ,

12/2
**(ಎಸ್. ನಾಗರಾಜಪ್ಪ)**
ಸರ್ಕಾರದ ಉಪ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ
(ವಿಜ್ಞಾನ ಮತ್ತು ತಂತ್ರಜ್ಞಾನ)

ಪ್ರತಿ:

1. ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಮಾಹಿತಿ ತಂತ್ರಜ್ಞಾನ , ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿರವರ ಆಪ್ತ ಕಾರ್ಯದರ್ಶಿ, ಮಾತಂ,ಜೈತಂ ಹಾಗೂ ವಿತಂ ಇಲಾಖೆ, ಬೆಂಗಳೂರು.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 885 |
| ವಿಧಾನ ಸಭೆಯ ಸದಸ್ಯರ ಹೆಸರು | ಶ್ರೀ ಬಸನಗೌಡ ದದ್ದಲ್ (ರಾಯಚೂರು ಗ್ರಾಮಾಂತರ) |
| ಉತ್ತರಿಸಬೇಕಾದ ದಿನಾಂಕ | 13.02.2019 |
| ಉತ್ತರಿಸುವವರು | ಮಾನ್ಯ ಉಪ ಮುಖ್ಯಮಂತ್ರಿಗಳು |
| ವಿಷಯ | ವಿಜ್ಞಾನ ಮತ್ತು ತಂತ್ರಜ್ಞಾನ ಪಾರ್ಕ್ ಸ್ಥಾಪನೆ |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿನಲ್ಲಿರುವ ವಿಶ್ವೇಶ್ವರಯ್ಯ ಮ್ಯೂಸಿಯಂ ಮಾದರಿಯಲ್ಲಿ ರಾಯಚೂರಿನಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಮ್ಯೂಸಿಯಂ ಅಥವಾ ಪಾರ್ಕ್ ಸ್ಥಾಪನೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು |
| ಆ) | ಇದ್ದಲ್ಲಿ, ಈ ಬಗ್ಗೆ ಕೈಗೊಂಡ ಕ್ರಮಗಳೇನು; | ರಾಯಚೂರಿನಲ್ಲಿ ಬೆಂಗಳೂರಿನ ವಿಶ್ವೇಶ್ವರಯ್ಯ ಮ್ಯೂಸಿಯಂ ಮಾದರಿಯಲ್ಲಿ ರಾಜ್ಯ ಸರ್ಕಾರದ ಮಾರ್ಗಸೂಚಿಯಂತೆ ಉಪ-ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಲಾಗುತ್ತಿದೆ. ಪ್ರಸ್ತುತ ಉಪ-ಪ್ರಾದೇಶಿಕ ವಿಜ್ಞಾನ ಕೇಂದ್ರವನ್ನು ಭಾಗಶಃ ಅಭಿವೃದ್ಧಿಪಡಿಸಿದ್ದು, ಕಾರ್ಯನಿರ್ವಹಿಸುತ್ತಿದೆ. ಸದರಿ ಕೇಂದ್ರವನ್ನು ಉನ್ನತೀಕರಿಸಲು ಅವಶ್ಯಕವಿರುವ ವೈಜ್ಞಾನಿಕ ಪ್ರದರ್ಶಿಕೆ ಮತ್ತು ಮಾದರಿಗಳ ಖರೀದಿಗೆ ಕ್ರಮ ಕೈಗೊಳ್ಳಲಾಗುತ್ತಿದೆ. ಅಲ್ಲದೆ, ಸದರಿ ಕೇಂದ್ರದಲ್ಲಿ ಒಂದು ಮಿನಿ ತಾರಾಲಯವನ್ನು ಸ್ಥಾಪಿಸಲು ಸಹ ಉದ್ದೇಶಿಸಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. |
| ಇ) | ಹೈದ್ರಾಬಾದ್ ಕರ್ನಾಟಕ ಪ್ರದೇಶ ವ್ಯಾಪ್ತಿಯ ಜಿಲ್ಲೆಗಳಲ್ಲಿನ ವಿದ್ಯಾರ್ಥಿಗಳಿಗೆ ವಿಜ್ಞಾನ ಮತ್ತು ತಂತ್ರಜ್ಞಾನ ವಿಷಯದ ಅರಿವು ಮೂಡಿಸಲು ಸರ್ಕಾರ ಯಾವ ಯೋಜನೆಗಳನ್ನು ಹಾಕಿಕೊಂಡಿದೆ? (ವಿವರ ನೀಡುವುದು) | ಹೈದ್ರಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಜಿಲ್ಲೆಗಳಲ್ಲಿನ ವಿದ್ಯಾರ್ಥಿಗಳಗೆ ವಿಜ್ಞಾನ ಮತ್ತು ತಂತ್ರಜ್ಞಾನ ವಿಷಯದ ಅರಿವು ಮೂಡಿಸಲು ಸರ್ಕಾರವು ಈ ಕೆಳಕಂಡ ಯೋಜನೆಗಳನ್ನು ಹಮ್ಮಿಕೊಂಡಿರುತ್ತದೆ:<br><br>1. **<u>ವಿಜ್ಞಾನ ಕೇಂದ್ರಗಳ ಸ್ಥಾಪನೆ:</u>**<br>ಹೈದ್ರಬಾದ್-ಕರ್ನಾಟಕ ಪ್ರದೇಶದ ಪ್ರತಿ ಜಿಲ್ಲೆಗಳಲ್ಲಿ ಸರ್ಕಾರವು ಉಪ-ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳುತ್ತಿದ್ದು, ಅವುಗಳ ಪ್ರಗತಿ ವಿವಿಧ ಹಂತಗಳಲ್ಲಿವೆ. ಬಳ್ಳಾರಿ, ಬೀದರ್ ಮತ್ತು ರಾಯಚೂರು ವಿಜ್ಞಾನ ಕೇಂದ್ರಗಳು ಭಾಗಶಃ ಅಭಿವೃದ್ಧಿಗೊಂಡಿದ್ದು, ಹೆಚ್ಚಿನ ಉನ್ನತೀಕರಣ ಕಾರ್ಯವು ಪ್ರಗತಿಯಲ್ಲಿದೆ.<br><br>ಕೊಪ್ಪಳ ಉಪ-ಪ್ರಾದೇಶಿಕ ವಿಜ್ಞಾನ ಕೇಂದ್ರದ ಕಟ್ಟಡ ಕಾಮಗಾರಿಯು ಸಂಪೂರ್ಣಗೊಂಡಿದ್ದು, ವಿಜ್ಞಾನ |

| | | ಪ್ರದರ್ಶಿಕೆ/ಮಾದರಿಗಳ ಖರೀದಿಯು ಪ್ರಕ್ರಿಯೆ ಪ್ರಗತಿಯಲ್ಲಿದೆ. ಮುಂದುವರಿದು, ಯಾದಗಿರಿ ಮತ್ತು ಚಿತ್ತಾಪುರ (ಗುಲ್ಬರ್ಗಾ) ದಲ್ಲಿ ಅಗತ್ಯ ಭೂಮಿಯನ್ನು ಗುರುತಿಸಲಾಗಿದ್ದು, ಕಾಮಗಾರಿ ಪ್ರಾರಂಭಿಸಬೇಕಾಗಿರುತ್ತದೆ.<br><br>2. <u>ಸಂಚಾರಿ ತಾರಾಲಯ ಯೋಜನೆ:</u><br>ಶಾಲೆಯ ಅಂಗಳದಲ್ಲೇ ತಾರಾಲಯ ಎಂಬ ಪರಿಕಲ್ಪನೆಯೊಂದಿಗೆ ಸಂಚಾರಿ ತಾರಾಲಯ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದ್ದು, ಈ ಯೋಜನೆಡಿ ಒಟ್ಟು 5 ಸಂಚಾರಿ ತಾರಾಲಯಗಳಲ್ಲಿ ಒಂದು ಸಂಚಾರಿ ತಾರಾಲಯವನ್ನು 2017-'18 ರಿಂದ ಹೈದ್ರಬಾದ್-ಕರ್ನಾಟಕ ಪ್ರದೇಶದ ಜಿಲ್ಲೆಗಳಿಗೆ ನಿಯೋಜಿಸಲಾಗಿದೆ. ಸದರಿ ತಾರಾಲಯ ಪ್ರಸ್ತುತದವರೆಗೆ ಹೈದ್ರಬಾದ್-ಕರ್ನಾಟಕ ಪ್ರದೇಶದಲ್ಲಿನ ಒಟ್ಟು 210 ಪ್ರೌಢಶಾಲೆಗಳಿಗೆ ಭೇಟಿ ನೀಡಿದ್ದು, 74,875 ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಇದರ ಪ್ರಯೋಜನ ಪಡೆದಿರುತ್ತಾರೆ.<br><br>ಅಲ್ಲದೆ, ಹೈದ್ರಬಾದ್-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ವ್ಯಾಪ್ತಿಯಲ್ಲಿನ ಆರು ಜಿಲ್ಲೆಗಳಿಗೆ ತಲಾ ಒಂದಂತೆ ಆರು ಸಂಚಾರಿ ತಾರಾಲಯಗಳನ್ನು ಖರಿದಿಸಲು ಈಗಾಗಲೇ ಟೆಂಡರ್ ಕರೆದಿದ್ದು, ಸದರಿ ಟೆಂಡರ್‌ನ ಮೌಲ್ಯಮಾಪನ ಕಾರ್ಯ ಪ್ರಗತಿಯಲ್ಲಿದೆ.<br><br>3. <u>ಜನ ಸಮೂಹ ಕಾರ್ಯಕ್ರಮಗಳು:</u><br><br>ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅಂಗಸಂಸ್ಥೆಗಳು ಮತ್ತು ವಿವಿಧ ವಿಜ್ಞಾನ ಕೇಂದ್ರಗಳ ಮುಖಾಂತರ ವಿಜ್ಞಾನ ಸಮ್ಮೇಳನ, ಕಾರ್ಯಾಗಾರ, ಮುಕ್ತ ಉಪನ್ಯಾಸ ಮಾಲೆ ಹಾಗೂ ಅಂತಾರಾಷ್ಟ್ರೀಯ ವಿಜ್ಞಾನ ದಿನಗಳ ಆಚರಣೆಗಳಂತಹ ಹತ್ತು ಹಲವಾರು ಜನ ಸಮೂಹ ಕಾರ್ಯಕ್ರಮಗಳನ್ನು ನಿರಂತರವಾಗಿ ಏರ್ಪಡಿಸಲಾಗುತ್ತಿದೆ. |

ಸಂಖ್ಯೆ: ಐಟಿಬಿ 30 ವಿತ್ರಸ 2019

(ಡಾ.ಜಿ.ಪರಮೇಶ್ವರ್)
ಉಪ ಮುಖ್ಯಮಂತ್ರಿಗಳು ಹಾಗೂ
ಮಾಹಿತಿ ತಂತ್ರಜ್ಞಾನ/ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು.

